# ರಾಷ್ಟ್ರೀಯ ಶಿಕ್ಷಣ ಕುರಿತು ಮುಮ್ಮಾತು

## ಶ್ರೀ ಅರಬಿಂದೋ

ಈ ಎರಡು ಅಧ್ಯಾಯಗಳು 1920 ಮತ್ತು 1921 ರಲ್ಲಿನ 'ಆರ್ಯ' ಪತ್ರಿಕೆಯ ಕೊನೆಯ ಎರಡು ಸಂಚಿಕೆಗಳಲ್ಲಿ ಪ್ರಕಟವಾಗಿವೆ.

1

ಸಾರ್ವತ್ರಿಕ ಶಿಕ್ಷಣದ ಅಗತ್ಯ ಮತ್ತು ಅದರಿಂದಾಗುವ ಪರಿಶುದ್ಧ ಅನುಕೂಲಗಳ ಕುರಿತು ಆಧುನಿಕ ಪ್ರಜ್ಞೆಗೆ ಬಲವಾದ ನಂಬಿಕೆಯಿದೆ. ಈ ಕುರಿತು ಏನೇ ಆಕ್ಷೇಪಣೆ ಇರಲಿ - ಇಲ್ಲದಿರಲಿ, ಯಾವುದೇ ಉದಾರವಾದಿ ಮನಸ್ಸು ಅಥವಾ ಜಾಗೃತ ರಾಷ್ಟ್ರೀಯ ಪ್ರಜ್ಞೆಯು ವಿವಾದಾತೀತವಾಗಿ ಒಪ್ಪಬೇಕಾದ ಈ ನಂಬಿಕೆಯು ಜನಾಂಗದ ವರ್ತಮಾನದ ಬೌದ್ಧಿಕ ಅತ್ಯಗತ್ಯಗಳಿಗೆ, ಜೀವಧಾರಕ ಪ್ರಯತ್ನಗಳಿಗೆ ಎಲ್ಲ ಸನ್ನಿವೇಶಗಳಲ್ಲೂ ಉತ್ತರವೀಯುತ್ತದೆ ಎಂದು ಯಾವಾಗಲೂ ಭಾವಿಸಬಹುದು. ಆದರೆ, ಶಿಕ್ಷಣ ಎಂದರೇನು, ಅದು ಕಾರ್ಯತಃ ಪ್ರಾಯೋಗಿಕವಾಗಿ ಅಥವಾ ಆದರ್ಶವಾಗಿ ಏನಿರಬೇಕು ಎಂಬುದರ ಕುರಿತು ತಾರ್ಕಿಕವಾದ, ಸುಸ್ಪಷ್ಟವಾದ ಸಾರ್ವತ್ರಿಕ ಒಪ್ಪಂದ ಅಥವಾ ಸಾಮಾನ್ಯ ಗ್ರಹಿಕೆ ಏನೂ ಇಲ್ಲ. ಈ ಅನಿಶ್ಚತತೆಯ ಜೊತೆಗೆ, ನಮ್ಮ ದೇಶವು ಏಶಿಯಾ ಹಾಗೂ ಯುರೋಪ್ ಅಥವಾ ಪಾಶ್ಚಿಮಾತ್ಯ ಪ್ರಜ್ಞೆಯು ಹುಟ್ಟುಹಾಕಿರುವ ತುಂಬ ವಿಭಿನ್ನವಾದ ಸಂಸ್ಕೃತಿಗಳು, ಇಂಗ್ಲಿಷ್ ಮತ್ತು ಭಾರತೀಯ ಮನಸ್ಸು ಮತ್ತು ಸಂಸ್ಕೃತಿಗಳು ಮುಖಾಮುಖಿಯಾಗುವ ಒತ್ತಡದ ಸಂಘರ್ಷಮಯ ಸನ್ನಿವೇಶದಲ್ಲಿ ವಿಚಿತ್ರವಾಗಿ ಸಿಲುಕಿಕೊಂಡಿರುವುದು ಮಾತ್ರವಲ್ಲದೆ ರಾಜಕೀಯ ದೌರ್ಬಲ್ಯವು ಶಿಕ್ಷಣದ ನಿರ್ಣಾಯಕ ಸ್ವರೂಪ ಮತ್ತು ಆತ್ಯಂತಿಕ ನಿಯಂತ್ರಣವನ್ನು ವಿದೇಶಿಯರ ಕೈಯಲ್ಲಿ ಒತ್ತೆ ಇಟ್ಟಿದ್ದು, ಸ್ವಾತಂತ್ರ್ಯದ ಚೈತನ್ಯಯುತ ಜಾಗೃತಿಯ ಕೂಗಿನೊಂದಿಗೆ ರಾಷ್ಟ್ರೀಯ ಶಿಕ್ಷಣದ ಬೇಡಿಕೆಯನ್ನು ತೀವ್ರವಾಗಿ ಹೆಚ್ಚಿಸಿದೆ. ಮತ್ತು, ಶಿಕ್ಷಣದ ಬಗ್ಗೆ ನಮಗೆ ಯಾವುದೇ ಸ್ಪಷ್ಟ ಕಲ್ಪನೆ ಇಲ್ಲದಿದ್ದಲ್ಲಿ ಈಗಿರುವ ವಾಸ್ತವ ಗೊಂದಲಮಯ ವಾತಾವರಣವನ್ನು ಮುಂದೆಯೂ ಎದುರಿಸಬೇಕಾದ ಸಂಭಾವ್ಯತೆ ಇದೆ.

ನಿಜಕ್ಕೂ ಶಿಕ್ಷಣ ಅಂದರೆ ಏನು ಅಥವಾ ಏನಿರಬೇಕು ಎಂಬುದರ ಕುರಿತು ನಮಗೆ ಸುಸ್ಪಷ್ಟವಾದ ಸಾಮಾನ್ಯ ತಿಳಿವಳಿಕೆ ಇಲ್ಲದಿದ್ದರೆ, ರಾಷ್ಟ್ರೀಯ ಶಿಕ್ಷಣದ ಬಗೆಗೆ ಇನ್ನೂ ಕಡಮೆ ತಿಳಿವಳಿಕೆ ಇದೆ. ಶಿಕ್ಷಣದ ಗುರಿ, ವಿಧಾನ, ವಸ್ತು ಮತ್ತು ಚೈತನ್ಯ ಎಲ್ಲವುಗಳ ಮೇಲೆ ವಿದೇಶಿಯ ಕರಾಳ ಛಾಯೆ ಮುಸುಕಿ ಕಾಂತಿಹೀನವಾಗಿರುವುದರಿಂದ ಈಗಿರುವ ಶಾಲೆಗಳು ಮತ್ತು ವಿಶ್ವವಿದ್ಯಾಲಯಗಳಲ್ಲಿ ದೊರೆಯುತ್ತಿರುವ ಬೋಧನೆಯ ರೀತಿ ಕೆಟ್ಟದಾಗಿದೆ; ಅಲ್ಲದೇ ರಾಷ್ಟ್ರೀಯ ಸಂಕಲ್ಪ, ಆತ್ಮ ಮತ್ತು ಚಾರಿತ್ರ್ಯವನ್ನು ಇದು ಅರಾಷ್ಟ್ರೀಯಗೊಳಿಸುತ್ತಿದೆ, ಕೆಳಮಟ್ಟಕ್ಕೆ ತರುತ್ತಿದೆ, ನಾಶಮಾಡುತ್ತಿದೆ ಎಂಬುದು ಬಹುತೇಕ ಎಲ್ಲರೂ ಒಮ್ಮತವಾಗಿ ಒಪ್ಪಿರುವ ಸಂಗತಿ ಎಂದು ತೋರುತ್ತಿದೆ. ಆದರೆ ಸಂಪೂರ್ಣವಾಗಿ ನಕಾರಾತ್ಮಕವಾದ ಇಂಥ ಒಪ್ಪಿಗೆಯು ನಮ್ಮನ್ನು ಹೆಚ್ಚು ದೂರ ಕರೆದುಕೊಂಡು ಹೋಗಲಾರದು; ಏಕೆಂದರೆ, ಈ ಶಿಕ್ಷಣದ ಸ್ಥಾನದಲ್ಲಿ, ತಾತ್ವಿಕವಾಗಿ ಅಥವಾ ವ್ಯವಹಾರಿಕವಾಗಿ ನಾವು ಏನನ್ನು ಕೊಡಬಯಸುತ್ತೇವೆ ಅಥವಾ ಪರ್ಯಾಯವಾಗಿ ಪ್ರಸ್ತಾಪಿಸಬೇಕಿದೆ ಎಂಬುದರ ಕುರಿತು ನಮಗಿದು ಏನನ್ನೂ ಹೇಳುವುದಿಲ್ಲ. ಶಾಲೆ ಅಥವಾ ವಿಶ್ವವಿದ್ಯಾಲಯ ಅಥವಾ ಶಿಕ್ಷಣ ಸಮಿತಿ ಅಥವಾ ಮಂಡಳಿಯೊಂದು ಸೇರಿಸಿಕೊಳ್ಳುವ "ರಾಷ್ಟ್ರೀಯ" ಎಂಬ ಹಣೆಪಟ್ಟಿ ವಿಶೇಷಣವಾಗಿ ತುಂಬ ಒಳ್ಳೆಯದೇ ಇರಬಹುದು. ಆದರೆ ಯಾವುದನ್ನು ಕೈಬಿಡಬೇಕೆಂದು

ಆಲೋಚಿಸಲಾಗುತ್ತಿದೆಯೋ ಆ ವ್ಯವಸ್ಥೆಯಲ್ಲೇ ತರಬೇತಿ ಪಡೆದ ಸ್ಥಳೀಯ ಪುರುಷರ ಗುಂಪಿನ ಕೈಯಲ್ಲಿ ರಾಷ್ಟ್ರೀಯ ಶಿಕ್ಷಣದ ಜವಾಬ್ದಾರಿ ಇರಿಸಿ, ಟೀಕೆಗೆ ಒಳಗಾಗಿರುವ ಈಗಿನ ವ್ಯವಸ್ಥೆಯಲ್ಲಿಯೇ ಕೆಲವು ವ್ಯತ್ಯಾಸ ಮಾಡಿಕೊಂಡು, ಒಂದಷ್ಟನ್ನು ಕಳೆದು-ಇನ್ನೊಂದಷ್ಟನ್ನು ಕೂಡಿಸಿ, ವಿವರಗಳು ಮತ್ತು ಪಠ್ಯಕ್ರಮದಲ್ಲಿ ಒಂದಷ್ಟು ನವೀಕರಣ ಮಾಡಿ, ತಾಂತ್ರಿಕತೆಯನ್ನೂ ಅಳವಡಿಸಿಕೊಂಡು ಸಮಸ್ಯೆಯನ್ನು ಪರಿಹರಿಸಿಬಿಟ್ಟಿದ್ದೇವೆ ಎಂದು ಭಾವಿಸುವುದು ನಿಜಕ್ಕೂ ಯಾವುದನ್ನೂ ಬದಲಾಯಿಸುವುದಿಲ್ಲ. ಈ ಬಗೆಯ ತಂತ್ರಗಳಿಂದ ತೃಪ್ತರಾಗುವುದು ಎಂದರೆ, ನಮ್ಮ ಬೌದ್ಧಿಕ ಗುರುತ್ವಕೇಂದ್ರದ ಸುತ್ತ ಗಿರಕಿ ಹೊಡೆದು, ಮೊದಲಿದ್ದಲ್ಲಿಗೇ ಮತ್ತೆ ಬಂದು, `ನಾವು ಬೇರೊಂದು ಹೊಸ ದೇಶಕ್ಕೆ ಬಂದಿದ್ದೇವೆ' ಎಂದು ಭಾವಿಸಿಕೊಂಡಂತೆ; ಇದು ಖಂಡಿತವಾಗಿಯೂ ತುಂಬ ಅತೃಪ್ತಿದಾಯಕ ನಡೆಯಾಗಿರುತ್ತದೆ. ಹೊಸ ಹಣೆಪಟ್ಟಿ ಹೊಂದಿದ ಸಂಸ್ಥೆಗಳು ಉಳಿದವುಗಿಂತ ಉತ್ತಮ ಶಿಕ್ಷಣ ಕೊಡಬಹುದು ಅಥವಾ ಕೊಡದೆಯೂ ಇರಬಹುದು. ಆದರೆ, ಅವರು ಯಾವುದರಲ್ಲಿ ಹೆಚ್ಚು ರಾಷ್ಟ್ರೀಯವಾಗಿದ್ದಾರೆ ಎಂಬುದು ಈ ವಿಚಾರದಲ್ಲಿ ಸಹಾನುಭೂತಿಯುಳ್ಳ ಸೂಕ್ಷ್ಮವಾಗಿ ವಿವೇಚಿಸುವ ಬುದ್ಧಿಗೂ ಸ್ಪಷ್ಟವಿಲ್ಲ.

ಈ ಸಮಸ್ಯೆ ನಿಜವಾಗಿಯೂ ಅತ್ಯಂತ ಕಠಿಣತಮವಾದುದು ಮತ್ತು ಯಾವ ಆಲೋಚನೆ ಅಥವಾ ಅಭ್ಯಾಸದ ನೆಲೆಯಿಂದ ಆರಂಭಿಸಬೇಕು, ಯಾವ ತತ್ವವನ್ನಾಧರಿಸಿ ರೂಪಿಸಬೇಕು ಅಥವಾ ಯಾವ ದಾರಿಯನ್ನು ಅನುಸರಿಸಿ ಹೊಸ ಚೌಕಟ್ಟನ್ನು ರಚಿಸಬೇಕು ಎಂಬುದನ್ನು ಕಂಡುಕೊಳ್ಳುವುದು ಅಷ್ಟು ಸುಲಭವಲ್ಲ. ಸನ್ನಿವೇಶಗಳು ಸಂಕೀರ್ಣವಾಗಿದ್ದು ರೂಪಿಸಬೇಕಾದ ವಿಷಯವು ಒಂದು ರೀತಿಯಲ್ಲಿ ಸಂಪೂರ್ಣವಾಗಿ ಹೊಸದಾಗಿದೆ. ಭಾರತದಲ್ಲಿ ಒಂದು ಕಾಲಕ್ಕೆ ಯಶಸ್ವಿಯಾಗಿದ್ದಿರಬಹುದಾದ ತತ್ವ, ವಿಧಾನ ಮತ್ತು ವ್ಯವಸ್ಥೆಯ - ಅದು ಎಷ್ಟೇ ಶ್ರೇಷ್ಠವಾಗಿದ್ದಾಗಿರಲಿ ಅಥವಾ ನಮ್ಮ ಹಿಂದಿನ ನಾಗರೀಕತೆ ಮತ್ತು ಸಂಸ್ಕೃತಿಯೊಂದಿಗೆ ಎಷ್ಟೇ ಹಾಸುಹೊಕ್ಕಾಗಿರಲಿ - ಪುನುರುಜ್ಜೀವನದಿಂದಷ್ಟೇ ತೃಪ್ತರಾಗುವಂತಿಲ್ಲ. ಕೇವಲ ಪುನರುಜ್ಜೀವನವು ನಮ್ಮ ವರ್ತಮಾನದ ತುರ್ತು ಅವಶ್ಯಕತೆಗಳನ್ನು ಹಾಗೂ ಭವಿಷ್ಯದ ಹೆಚ್ಚಿನ ಬೇಡಿಕೆಗಳನ್ನು ಈಡೇರಿಸಲಾಗದ ಒಂದು ಹತಾಶ, ನಿಷ್ಫಲ ಮತ್ತು ಅಸಾಧ್ಯವಾದ ಅಸಮರ್ಪಕ ಪ್ರಯತ್ನವಾಗುತ್ತದೆ. ಮತ್ತೊಂದೆಡೆ ಇಂಗ್ಲಿಷ್, ಜರ್ಮನ್ ಅಥವಾ ಅಮೇರಿಕನ್ ಶಾಲೆ ಮತ್ತು ವಿಶ್ವವಿದ್ಯಾಲಯಗಳ ವ್ಯವಸ್ಥೆ ಅಥವಾ ಅವುಗಳಿಗಿಂತ ಸ್ವಲ್ಪ ಭಿನ್ನವಾಗಿರುವುದನ್ನು ಅಳವಡಿಸಿಕೊಂಡು, ಅವುಗಳಿಗೆ ಭಾರತದ ಬಣ್ಣ ಕೊಡುವುದು ನಿಜಕ್ಕೂ ಆಕರ್ಷಕ ಮತ್ತು ಸರಳಾತಿಸರಳ ಕೆಲಸ. ಹೀಗೆ ಮಾಡುವುದು ಆಲೋಚನೆ ಮತ್ತು ಹೊಸ ಪ್ರಯೋಗ ಮಾಡುವ ಶ್ರಮವನ್ನೂ ಉಳಿಸುತ್ತದೆ! ಹೀಗಾಗುವುದಾದರೆ, ಶಿಕ್ಷಣದ ರಾಷ್ಟ್ರೀಕರಣವೆಂಬ ಬೇಡದ ದೊಡ್ಡ ಗದ್ದಲದ ಅಗತ್ಯವೂ ಇರುವುದಿಲ್ಲ. ಆಗ ಅಗತ್ಯವಾಗುವುದು ನಿಯಂತ್ರಣ ಶಕ್ತಿಗಳು, ಬೋಧನಾ ಮಾಧ್ಯಮ, ಪಠ್ಯಕ್ರಮದ ಚೌಕಟ್ಟು ಮತ್ತು ಅಳವಡಿಕೆಯಲ್ಲಿ ಬದಲಾವಣೆ ಮತ್ತು ಸ್ವಲ್ಪಮಟ್ಟಿಗೆ ವಿಷಯಗಳ ಸಮತೋಲನ ಮಾಡುವುದು ಅಷ್ಟೇ. ಆದರೆ, ಎಷ್ಟೇ ಕಷ್ಟಕರವಾಗಿರಲಿ, ಭಾರತೀಯ ಆತ್ಮ, ಅದರ ಅಗತ್ಯ, ಮನೋಧರ್ಮ ಹಾಗೂ ಸಂಸ್ಕೃತಿಗೆ ಸೂಕ್ತವಾದ ರೂಪ ಕೊಡಲು ಅನ್ವೇಷಿಸುತ್ತಿರುವ ನಾವು, ಕೇವಲ ಗತಕಾಲಕ್ಕೆ ನಿಷ್ಠರಾಗಿ ಉಳಿಯುವುದು ಮಾತ್ರವಲ್ಲ, ಭಾರತದ ಆತ್ಮದ ಬೆಳವಣಿಗೆಗೆ, ಆಕೆಯ ಭವಿಷ್ಯದ ಅಗತ್ಯಕ್ಕೆ, ಮುಂಬರಲಿರುವ ಆಕೆಯ ಭವ್ಯವಾದ ಸ್ವ-ಸೃಷ್ಟಿಗೆ, ಆಕೆಯ ಸನಾತನ ಚೈತನ್ಯಕ್ಕೆ ಅವಶ್ಯವಿರುವ, ನಮ್ಮ ಮನಸ್ಸಿನಲ್ಲಿರುವ ಹೆಚ್ಚು ಆಳವಾದ, ಮಹತ್ತರವಾದ ಶಿಕ್ಷಣದ ಕಲ್ಪನೆಯನ್ನು ಹುಡುಕುತ್ತಿದ್ದೇವೆ ಎಂದು ನಾನು ಭಾವಿಸುತ್ತೇನೆ. ನಮ್ಮ ಮನಸ್ಸಿನಲ್ಲಿ ಇದನ್ನು ನಾವು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ ಮತ್ತು ಇದನ್ನು ಬೃಹತ್ತಾಗಿ ಅನುಷ್ಠಾನಕ್ಕೆ ತರುವ ಮುನ್ನ ನಾವು ಮೂಲಭೂತ ಅಂಶಗಳನ್ನು ಶೋಧಿಸಬೇಕಾದುದು ಮತ್ತು ಖಚಿತಪಡಿಸಿಕೊಳ್ಳಬೇಕಾದುದು ಅವಶ್ಯ. ಹಾಗೆ ಮಾಡದಿದ್ದಲ್ಲಿ ತೋರ್ಕೆಗೆ ಮಾತ್ರವೇ ಸರಿ ಕಾಣುವ ಆದರೆ ಅಸಹಜದ ಅಥವಾ ಸರಿಯಾಗಿರದ ಬಿಂದುವಿನಿಂದ ಆರಂಭಿಸಿ ಸರಿಯಾದ

ಹಾದಿಯಿಂದ ದೂರ ಮತ್ತು ಸಂಪೂರ್ಣವಾಗಿ ವಿಭಿನ್ನವಾದ ಹಾದಿಯಲ್ಲಿ ಯಾವುದೇ ಗುರಿಯಿರದ ಕೇವಲ ಶೂನ್ಯ ಮತ್ತು ವೈಫಲ್ಯದ ಕಡೆಗೆ ಕೊಂಡೊಯ್ಯುವುದಕ್ಕಿಂತ ಸುಲಭವಾದುದು ಇನ್ನೊಂದಿಲ್ಲ.

ಆದರೆ, ಮೊದಲಿಗೆ ರಾಷ್ಟ್ರೀಯ ಶಿಕ್ಷಣ ಎಂಬ ವಿಚಾರದಲ್ಲಿ ಯಾವುದೇ ಅರ್ಥವಿಲ್ಲ ಮತ್ತು ಇರಲು ಸಾಧ್ಯವೇ ಇಲ್ಲ ಅಥವಾ ಅದರ ಬಗ್ಗೆ ಚಿಂತಿಸುವುದರಲ್ಲಿ ಪ್ರಯೋಜನವಿಲ್ಲ; ಉತ್ತಮ ಪೌರತ್ವದ ಕುರಿತು ತರಬೇತಿ ಹೊರತಾಗಿ ದೇಶಭಕ್ತಿಯು ಯಾವುದೇ ನ್ಯಾಯಬದ್ಧ ಸ್ಥಾನವನ್ನು ಹೊಂದಿರದ ಕ್ಷೇತ್ರದಲ್ಲಿ ಅಸಹಜ ಮತ್ತು ಸಂಕುಚಿತ ದೇಶಕ್ತಿಯು ಮಧ್ಯಪ್ರವೇಶ ಮಾಡುವ ಇಡೀ ಪರಿಕಲ್ಪನೆಯೇ ಅನಪೇಕ್ಷಿತವಾದ ಹಾಗೂ ಲಾಭದಾಯಕವಲ್ಲದ ಹುಸಿ ಪ್ರಯತ್ನ ಎಂಬ ದುರ್ಬಲಗೊಳಿಸುವ ಮೂಲಭೂತ ಆಕ್ಷೇಪಣೆಯನ್ನು ಬದಿಗಿಟ್ಟು ಅಥವಾ ಕನಿಷ್ಠ ಅದಕ್ಕೆ ತಕ್ಕ ಸ್ಥಾನವನ್ನು ನೀಡುವುದರ ಮೂಲಕ ಅದರ ಮೇಲೆ ಬೆಳಕು ಚೆಲ್ಲೋಣ. ಈ ಒಂದು ಉದ್ದೇಶಕ್ಕಾಗಿ ವಿಶೇಷ ರೀತಿಯ ಅಥವಾ ವಿಶೇಷ ರೂಪದ ಶಿಕ್ಷಣದ ಅಗತ್ಯವಿಲ್ಲ. ಏಕೆಂದರೆ, ಉತ್ತಮ ಪೌರತ್ವದ ತರಬೇತಿಯ ಅಗತ್ಯಗಳು, ಅದು ಪೂರ್ವದಲ್ಲಿಯಾಗಲೀ ಪಶ್ಚಿಮದಲ್ಲಿಯಾಗಲೀ – ಇಂಗ್ಲೆಂಡ್, ಜರ್ಮನಿ, ಜಪಾನ್ ಅಥವಾ ಭಾರತ ಎಲ್ಲಿಯೇ ಆಗಲೀ ಒಂದೇ ಆಗಿರುತ್ತವೆ. ಮನುಕುಲ ಮತ್ತದರ ಅಗತ್ಯಗಳು ಎಲ್ಲೆಡೆಯೂ ಒಂದೇ ಆಗಿರುತ್ತವೆ, ಮತ್ತು ಸತ್ಯ ಮತ್ತು ಜ್ಞಾನಕ್ಕೆ ದೇಶದ ಮಿತಿ ಎಂಬುದು ಇಲ್ಲ; ಹಾಗೆಯೇ ಶಿಕ್ಷಣವೂ ಯಾವುದೇ ದೇಶ, ಯಾವುದೇ ಗಡಿಗಳು ಇಲ್ಲದ ಸಾರ್ವತ್ರಿಕ ವಿಷಯವಾಗಿರಲೇಬೇಕು. ಉದಾಹರಣೆಗೆ, ರಾಷ್ಟ್ರೀಯ ವಿಜ್ಞಾನ ಶಿಕ್ಷಣ ಎಂಬುದರ ಅರ್ಥವೇನು? ಯುರೋಪಿನಿಂದ ಬಂದಿವೆ ಎನ್ನುವ ಕಾರಣಕ್ಕೆ ನಾವು ಆಧುನಿಕ ಸತ್ಯ ಮತ್ತು ವಿಜ್ಞಾನದ ಆಧುನಿಕ ವಿಧಾನವನ್ನು ತಿರಸ್ಕರಿಸಿ ಸಾಂಪ್ರದಾಯಿಕ ಭಾರತದ ವಿಜ್ಞಾನದ ಅಪರಿಪೂರ್ಣ ಜ್ಞಾನದೆಡೆಗೆ ತಿರುಗಬೇಕು; ಗೆಲಿಲಿಯೋ, ನ್ಯೂಟನ್ ಮತ್ತು ಅವರನ್ನು ಅನುಸರಿಸಿಕೊಂಡು ಬಂದ ಎಲ್ಲವನ್ನೂ ತಿರಸ್ಕರಿಸಿ, ಭಾಸ್ಕರ, ಆರ್ಯಭಟ್ಟ ಮತ್ತು ವರಾಹಮಿಹಿರಗೆ ಗೊತ್ತಿದ್ದುದನ್ನು ಮಾತ್ರ ಕಲಿಸಬೇಕು ಎನ್ನುವುದು ಅದರ ಅರ್ಥವೇ? ಅಥವಾ ಸಂಸ್ಕಂÈತ ಇಲ್ಲವೆ ಪ್ರಚಲಿತದಲ್ಲಿರುವ ಸ್ಥಳೀಯ ಭಾಷೆಗಳ ಕಲಿಕೆಯು ಲ್ಯಾಟಿನ್ ಅಥವಾ ಯುರೋಪಿನಲ್ಲಿನ ಜೀವಂತ ಆಧುನಿಕ ಭಾಷೆಗಳ ಕಲಿಕೆಯ ರೀತಿ ಮತ್ತು ವಿಧಾನದಿಂದ ಹೇಗೆ ಭಿನ್ನವಾಗಿರಬೇಕು? ಹಾಗಾದರೆ, ನಾದಿಯಾದ ಟೋಲ್ಗಳ (tols of Nadiya) ವಿಧಾನಗಳಿಗೆ ಅಥವಾ ಪ್ರಾಚೀನ ತಕ್ಷಶಿಲಾ ಅಥವಾ ನಲಂದದಲ್ಲಿ ಪ್ರಚಲಿತದಲ್ಲಿದ್ದ ವ್ಯವಸ್ಥೆಗೆ – ಅವು ಹೇಗಿದ್ದವು ಎಂದು ನಮಗೆ ಕಂಡುಕೊಳ್ಳಲು ಸಾಧ್ಯವಾಗುವುದಾದರೆ - ತಿರುಗಿ ಹೋಗಬೇಕೆ? ಬಹಳ ಅಂದರೆ, ನಮ್ಮ ದೇಶದ ಪ್ರಾಚೀನ ಕಾಲದ ಬಗ್ಗೆ ಅಧ್ಯಯನ ಮಾಡಲು ಹೆಚ್ಚು ಅವಕಾಶವನ್ನು ಕೇಳಬಹುದು, ಇಂಗ್ಲಿಷ್ ಮಾಧ್ಯಮದ ಸ್ಥಾನದಲ್ಲಿ ಸ್ಥಳೀಯ ಭಾಷೆಗಳನ್ನು ತಂದು, ಇಂಗ್ಲಿಷ್‌ನ ಕಲಿಕೆಯನ್ನು ಎರಡನೇ ಭಾಷೆಯ ಕಲಿಕೆಗೆ ತಳ್ಳಬಹುದು. ಆದರೆ, ಈ ಬದಲಾವಣೆಗಳು ಔಚಿತ್ಯಪೂರ್ಣವೇ ಎಂದು ಪ್ರಶ್ನಿಸುವ ಸಾಧ್ಯತೆ ಇದೆ. ನಾವು ಈಗ ಇಪ್ಪತ್ತನೆಯ ಶತಮಾನದಲ್ಲಿ ಬದುಕುತ್ತಿದ್ದೇವೆ, ಚಂದ್ರಗುಪ್ತ ಅಥವಾ ಅಕ್ಬರ್‌ನ ಕಾಲದ ಭಾರತವನ್ನು ಈಗ ಪುನಃ ಸ್ಥಾಪಿಸಲಾಗದು; ನಾವು ಸತ್ಯ ಮತ್ತು ಜ್ಞಾನದ ಶೋಧನೆಗಳಲ್ಲಿ ಆಗುತ್ತಿರುವ ಪ್ರಗತಿಯ ಬಗ್ಗೆ ಅರಿವನ್ನು ಹೊಂದುವ ಅಗತ್ಯವಿದೆ, ವಾಸ್ತವಿಕ ಸ್ಥಿತಿಗತಿಗಳೊಂದಿಗೆ ಬದುಕಲು ನಮ್ಮನ್ನು ನಾವು ಸಿದ್ಧಗೊಳಿಸಿಕೊಳ್ಳಬೇಕಾಗುತ್ತದೆ, ಆದ್ದರಿಂದ ನಮ್ಮ ಶಿಕ್ಷಣವು ತನ್ನ ರೂಪ ಮತ್ತು ವಸ್ತುವಿನಲ್ಲಿ ನವನವೀನವೂ, ಜೀವನ ಮತ್ತು ಚೈತನ್ಯದಲ್ಲಿ ಆಧುನಿಕವೂ ಆಗಿರಬೇಕಿದೆ.

ಒಂದು ಕಾಲದಲ್ಲಿ ನಮ್ಮ ಸಂಸ್ಕೃತಿಯ ಕ್ರಿಯಾತ್ಮಕ ಚೌಕಟ್ಟಾಗಿದ್ದ ಅದರೆ ಈಗ ಸತ್ತಿರುವ ಅಥವಾ ಸಾಯುತ್ತಿರುವ ವಿಚಾರಗಳ ಗತ ಸ್ವರೂಪಗಳ ಕಡೆಗೆ ಪುನಃ ಸಾಗುವ ಪ್ರಗತಿವಿರೋಧ ಪ್ರವೃತ್ತಿಯ ಹಿಮ್ಮುಖ ಚಲನೆಗೆ ರಾಷ್ಟ್ರೀಯ ಶಿಕ್ಷಣವು ಸಾಧನವಾಗಬಹುದು ಎಂಬ ಅದರ ಕಲ್ಪನೆಯ ವಿರುದ್ಧ ಈ ಎಲ್ಲ ಆಕ್ಷೇಪಣೆಗಳು ಉದ್ದೇಶಿತವಾಗಿದ್ದರೆ ಮಾತ್ರ

ಪ್ರಸ್ತುತವೆನಿಸುತ್ತವೆ; ಆದರೆ ವಿಚಾರ ಅಥವಾ ಪ್ರಯತ್ನ ಅದಲ್ಲ. ಸ್ವದೇಶಿಯ ಜೀವಂತ ಚೈತನ್ಯಕ್ಕೆ ಹೇಗೆ ರೈಲುಗಾಡಿ ಮತ್ತು ವಿದ್ಯುತ್ ಚಾಲನೆಯ ವಾಹನಗಳಿಂದ ಪ್ರಾಚೀನ ರಥಗಳು, ಎತ್ತಿನ ಗಾಡಿಗಳಿಗೆ ಹಿಂದಿರುಗುವುದರ ಅಗತ್ಯವಿಲ್ಲವೋ ಹಾಗೆಯೇ ರಾಷ್ಟ್ರೀಯ ಶಿಕ್ಷಣವನ್ನು ಬೇಡುತ್ತಿರುವ ಒಂದು ಜೀವಂತ ಚೈತನ್ಯಕ್ಕೆ ಭಾಸ್ಕರನ ಖಗೋಲ ವಿಜ್ಞಾನ ಮತ್ತು ಗಣಿತಕ್ಕೆ ಅಥವಾ ನಲಂದದಲ್ಲಿದ್ದ ವ್ಯವಸ್ಥೆಯ ರೂಪಗಳಿಗೆ ಹಿಂದಿರುಗುವ ಅವಶ್ಯಕತೆ ಇಲ್ಲವೇ ಇಲ್ಲ. ನಿಸ್ಸಂದೇಹವಾಗಿ ಈ ವಿಚಾರ ಕುರಿತಂತೆ ಸಾಕಷ್ಟು ಹಿಮ್ಮುಖ ಭಾವನಾತ್ಮಕತೆಯಿದೆ; ಸಾಮಾನ್ಯ ತಿಳಿವಳಿಕೆ ಮತ್ತು ತಾರ್ಕಿಕತೆಯ ಮೇಲೆ ಕೆಲವು ವಿಚಿತ್ರವಾದ ಹಿಂಸಾಚಾರಗಳು ನಡೆದಿವೆ ಹಾಗೂ ನಿಜವಾದ ಸಮಸ್ಯೆಯನ್ನು ಪೂರ್ವಾಗ್ರಹಪೀಡಿತವಾಗಿ ಮಾಡುವಂತಹ ಕದಡಿಸುವ ವಿಲಕ್ಷಣತೆಗಳೂ ಇವೆ, ಆದರೆ ಈ ಅಸಂಬದ್ಧ ಅತಿರೇಕದ ಕಲ್ಪನೆಯ ಅಂಶಗಳು ವಿಷಯಕ್ಕೆ ತಪ್ಪು ಬಣ್ಣವನ್ನು ಕೊಡುತ್ತಿವೆ. ನಾವು ಕ್ರಿಯಾಶೀಲರಾಗಿರಬೇಕಿರುವುದು ಜೀವಂತ ಮತ್ತು ಅತಿಮುಖ್ಯ ವಿಷಯವಾದ ಚೈತನ್ಯವಾದುದರಿಂದ ಅದು ಆಧುನಿಕತೆ ಮತ್ತು ಪ್ರಾಚೀನತೆಯ ನಡುವಿನ ಪ್ರಶ್ನೆ ಆಗುವುದಿಲ್ಲ, ಬದಲಿಗೆ ಆಮದು ನಾಗರಿಕತೆ ಮತ್ತು ಭಾರತೀಯ ಮನಸ್ಸು-ಸ್ವಭಾವದ ಅಗಾಧ ಸಾಧ್ಯತೆಗಳ ನಡುವಿನ ಪ್ರಶ್ನೆ ಆಗಿದೆ; ವರ್ತಮಾನ - ಭೂತಗಳ ನಡುವಿನ ಪ್ರಶ್ನೆ ಅಲ್ಲ, ಬದಲಿಗೆ ವರ್ತಮಾನ - ಭವಿಷ್ಯಗಳ ನಡುವಿನ ಪ್ರಶ್ನೆಯಾಗಿದೆ. ಇದು ಐದನೇ ಶತಮಾನಕ್ಕೆ ಹಿಂದಿರುಗುವುದಲ್ಲ, ಆದರೆ ಬರಲಿರುವ ಶತಮಾನಗಳ ಆರಂಭ. ಹಿಮ್ಮುಖ ಚಲನೆಯಲ್ಲ, ಬದಲಿಗೆ ಸದ್ಯದ ಅಸಹಜ ಮತ್ತು ಕೃತಕ ವರ್ತಮಾನದಿಂದ ಬಿಡುಗಡೆ ಪಡೆದು ಭಾರತದ ಆತ್ಮದ, ಶಕ್ತಿಯ ಅಪೇಕ್ಷೆಯಾಗಿರುವ ತನ್ನಲ್ಲಿ ಅಡಕವಾಗಿರುವ ಅಗಾಧ ಸಾಧ್ಯತೆಗಳತ್ತ ಚಲಿಸುವುದು.

ರಾಷ್ಟ್ರೀಯ ಶಿಕ್ಷಣದ ವಿರುದ್ಧದ ವಾದವು - ವಿಷಯದ ಬಗ್ಗೆ ಮಾಹಿತಿ ಗಳಿಸುವುದು ಅಥವಾ ಮಾಹಿತಿ ಸಂಗ್ರಹಿಸುವುದೇ ಶಿಕ್ಷಣದ ಆತ್ಯಂತಿಕ ಉದ್ದೇಶ ಅಥವಾ ಅದುವೇ ಅದರ ಮುಖ್ಯ ಆಶಯ ಎಂಬ ನಿಸ್ಸತ್ತ್ವ ಶೈಕ್ಷಣಿಕ ಕಲ್ಪನೆಯ ವಿರುದ್ಧವಿರುವ ವಾದದಿಂದ ಮೊದಲಾಗುತ್ತದೆ. ಆದರೆ ವಿವಿಧ ಬಗೆಯ ಮಾಹಿತಿಗಳನ್ನು ಪಡೆದುಕೊಳ್ಳುವುದು ಕೇವಲ ಒಂದು ಸಾಧನವೇ ವಿನಃ, ಅದುವೇ ಶಿಕ್ಷಣದ ಪ್ರಮುಖ ಸಾಧನವಾಗಲೀ ಅಗತ್ಯವಾಗಲೀ ಅಲ್ಲ: ಶಿಕ್ಷಣದ ಪ್ರಮುಖ ಗುರಿಯೆಂದರೆ, ಹೆಚ್ಚಿಗೆ ಏನಿಲ್ಲದಿದ್ದರೂ ಮಾನವನ ಮನಸ್ಸು ಮತ್ತು ಚೈತನ್ಯದ ಶಕ್ತಿಗಳನ್ನು ಕಟ್ಟಿಕೊಡುವುದು; ಜ್ಞಾನವನ್ನು ರೂಪಿಸುವುದು ಅಥವಾ ನನ್ನ ಚಿಂತನೆಯ ಪ್ರಕಾರ, ಜ್ಞಾನ ಮತ್ತು ಮನಃಶಕ್ತಿಯನ್ನು ಉದ್ದೀಪನಗೊಳಿಸುವುದು; ಜ್ಞಾನ, ಚಾರಿತ್ರ್ಯ ಮತ್ತು ಸಂಸ್ಕೃತಿಯನ್ನು ಬಳಸುವ ಶಕ್ತಿಯನ್ನು ಹೊರಸೆಳೆಯುವುದು. ಈ ವೈಶಿಷ್ಟ್ಯವು ಅಗಾಧ ವ್ಯತ್ಯಾಸ ಉಂಟುಮಾಡುತ್ತದೆ. ನಮಗೆ ಬೇಕಾದಂತೆ ಉಪಯೋಗಿಸಲು ವಿಜ್ಞಾನದ ಮಾಹಿತಿಯನ್ನು ಗಳಿಸುವುದನ್ನಷ್ಟೇ ಅಪೇಕ್ಷಿಸುವುದಾದರೆ, ಪಾಶ್ಚಾತ್ಯದ ವಿಜ್ಞಾನದ ಮೇಲೆ ಮೇಲುಗೈ ಸಾಧಿಸಲು ಅದನ್ನು ಜಾಗರೂಕವಾಗಿ ವ್ಯವಸ್ಥಿತಗೊಂಡ ತುಣುಕುಗಳಾಗಿಯೋ ಅಥವಾ ಸಂಪೂರ್ಣವಾಗಿ ಅರ್ಥೈಸಿಕೊಳ್ಳದ ತುಣುಕುಗಳಾಗಿಯೋ ಪಡೆದುಕೊಳ್ಳುವುದಷ್ಟೇ ಸಾಕಾಗಬಹುದು ಎಂಬುದು ಬಹಳ ನಿಜ. ಆದರೆ ಮುಖ್ಯ ಪ್ರಶ್ನೆ, ನಾವು ಯಾವ ವಿಜ್ಞಾನ ಕಲಿಯುತ್ತೇವೆ ಎಂಬುದಷ್ಟೇ ಅಲ್ಲ; ಆ ನಮ್ಮ ವಿಜ್ಞಾನದಿಂದ ಏನು ಮಾಡುತ್ತೇವೆ, ವೈಜ್ಞಾನಿಕ ಮನಸ್ಸು ಮತ್ತು ವೈಜ್ಞಾನಿಕ ಸಂಶೋಧನೆ ಮಾಡುವ ಅಭ್ಯಾಸವನ್ನು ಗಳಿಸಿದ ನಂತರ - ನಾನು ಭಾರತೀಯ ಮನೋಧರ್ಮವು ತನ್ನದೇ ಸ್ವಭಾವಕ್ಕನುಗುಣವಾಗಿ ಮುಕ್ತವಾಗಿ ಹೊಸ ವಿಧಾನಗಳನ್ನು ಶೋಧಿಸಿಕೊಳ್ಳುವುದನ್ನು ಅಥವಾ ಭೌತಿಕ ವಿಜ್ಞಾನಕ್ಕೆ ಹೊಸ ತಿರುವು ನೀಡುವ ಸಾಧ್ಯತೆಗಳನ್ನು ಬದಿಗಿಡುತ್ತಿದ್ದೇನೆ – ಹೇಗೆ ನಾವು ಮನುಷ್ಯನ ಮನಸ್ಸಿನ ಇತರ ಶಕ್ತಿಗಳಿಗೆ ಮತ್ತು ವೈಜ್ಞಾನಿಕ ಜ್ಞಾನದೊಂದಿಗೆ, ಅಷ್ಟೇ ಜ್ಞಾನ ಮತ್ತು ಶಕ್ತಿ ನೀಡುವ ನಮ್ಮ ವಿವೇಕ ಹಾಗೂ ಸ್ವಭಾವವದ ಭಾಗಗಳಿಗೆ ಆಮೂಲಾಗ್ರವಾಗಿರುವ ಇತರ ಜ್ಞಾನದೊಂದಿಗೆ ಹೇಗೆ ಸಂಬಂಧಿಸುತ್ತೇವೆ ಎಂಬುದು ಮುಖ್ಯ. ಇಲ್ಲಿ, ಭಾರತೀಯ ಮನಸ್ಸಿನ ವಿಶಿಷ್ಟ ಗುಣ, ಅದರ ಮನೋವೈಜ್ಞಾನಿಕ ಪರಂಪರೆ,

ಪೂರ್ವಿಕರ ಸಾಮರ್ಥ್ಯ, ಪರಿವರ್ತನೆ, ಜ್ಞಾನ ಇವು ಅತ್ಯುನತ ಪ್ರಮುಖ ಸಾಂಸ್ಕೃತಿಕ ಅಂಶಗಳನ್ನು ಕೊಡುಗೆಯಾಗಿ ನೀಡುತ್ತವೆ. ಸಂಸ್ಕೃತ ಅಥವಾ ಇನ್ನೊಂದು ಭಾಷೆಯನ್ನು ಹೆಚ್ಚು ಸಹಜವಾದ, ಸಮರ್ಥವಾದ ಮತ್ತು ಮನಸ್ಸನ್ನು ಉದ್ದೀಪಿಸುವ ಯಾವುದೇ ವಿಧಾನದಿಂದ ಪಡೆದುಕೊಳ್ಳಬೇಕು. ಹೀಗೆ ಮಾಡುವಾಗ ನಾವು ಹಿಂದಿನ ಅಥವಾ ಇಂದಿನ ಯಾವುದೋ ಒಂದು ಬೋಧನಾ ವಿಧಾನವನ್ನು ನೆಚ್ಚಿಕೊಳ್ಳಬೇಕಿಲ್ಲ. ಆದರೆ, ಇಲ್ಲಿ ಮಹತ್ವದ ಪ್ರಶ್ನೆಯೆಂದರೆ, ನಮ್ಮದೇ ಆದ ಸಂಸ್ಕೃÉತಿಯ ಸಾರ ಮತ್ತು ಅದರ ಬಗ್ಗೆ ಒಂದು ಒಳ ಅರಿವನ್ನು ಹೊಂದಲು, ಮತ್ತು ಈಗಲೂ ಜೀವಂತವಾಗಿರುವ ನಮ್ಮ ಭೂತ ಮತ್ತು ಇನ್ನೂ ಹುಟ್ಟಿಲ್ಲದ ನಮ್ಮ ಭವಿಷ್ಯದ ನಡುವೆ ಪ್ರಕಾಶಮಾನವಾದ ನಿರಂತರತೆಯನ್ನು ತಂದುಕೊಳ್ಳಲು ಸಂಸ್ಕೃತ ಮತ್ತು ದೇಶಿಯ ಭಾಷೆಗಳನ್ನು ಹೇಗೆ ಕಲಿಯುತ್ತೇವೆ ಮತ್ತು ಬಳಸುತ್ತೇವೆ; ಅನ್ಯ ಜೀವನ, ವಿಚಾರಗಳು ಮತ್ತು ಸಂಸ್ಕೃತಿಗಳನ್ನು ಅರಿಯಲು ನಮ್ಮ ಸುತ್ತಮುತ್ತಲಿನ ಜಗತ್ತಿನೊಂದಿಗೆ ಸರಿಯಾದ ಸಂಬಂಧವನ್ನು ಸ್ಥಾಪಿಸಲು ಇಂಗ್ಲಿಷ್ ಅಥವಾ ಬೇರೆ ಯಾವುದೇ ವಿದೇಶಿ ಭಾಷೆಯನ್ನು ಹೇಗೆ ಕಲಿಯುತ್ತೇವೆ ಮತ್ತು ಉಪಯೋಗಿಸುತ್ತೇವೆ ಎನ್ನುವುದು ಮುಖ್ಯ ಪ್ರಶ್ನೆ. ಖಂಡಿತವಾಗಿಯೂ ಆಧುನಿಕ ಸತ್ಯ ಮತ್ತು ಜ್ಞಾನವನ್ನು ಅಲಕ್ಷಿಸದೆ ನಮ್ಮ ಸ್ವಂತ ಅಸ್ತಿತ್ವ, ನಮ್ಮ ಸ್ವಂತ ಮನಸ್ಸು, ನಮ್ಮ ಸ್ವಂತ ಚೈತನ್ಯದ ಅಡಿಪಾಯದ ಮೇಲೆ ಕಟ್ಟುವುದೇ ಒಂದು ರಾಷ್ಟ್ರೀಯ ಶಿಕ್ಷಣದ ನಿಜವಾದ ಗುರಿ ಮತ್ತು ತತ್ವವಾಗಿದೆ.

ಎರಡನೆಯ ಮುಕ್ತ ಅಥವಾ ಸೂಚಿತ ಪ್ರತಿಕೂಲವಾದದ ನಿಲುವು ಏನೆಂದರೆ, ನಾವು ಗಳಿಸಿಕೊಳ್ಳಬೇಕಾದುದು ಮತ್ತು ನಮ್ಮನ್ನು ಹೊಂದಿಸಿಕೊಳ್ಳಬೇಕಾದುದು ಆಧುನಿಕತೆಗೆ, ಅರ್ಥಾತ್ ಯುರೋಪ್‌ನ ನಾಗರಿಕತೆಗೆ; ಹೀಗೆ ಮಾಡಿದರೆ ಮಾತ್ರ ನಾವು ಬದುಕಲು ಮತ್ತು ಪ್ರಗತಿ ಹೊಂದಲು ಸಾಧ್ಯ ಮತ್ತು ನಮ್ಮ ಶಿಕ್ಷಣವು ನಮಗೆ ಕಲಿಸಬೇಕಾದುದು ಇದನ್ನೇ ಎಂಬುದಾಗಿದೆ. ರಾಷ್ಟ್ರೀಯ ಶಿಕ್ಷಣದ ಕಲ್ಪನೆಯು ಈ ಗೃಹೀತದ ಸಮರ್ಪಕತೆಯ ಕುರಿತು ಪ್ರಶ್ನೆ ಎತ್ತುತ್ತದೆ. ಯುರೋಪ್ ತನ್ನ ಪ್ರಾಚೀನ ಸಂಸ್ಕೃತಿಯ ಬಹುಪಾಲನ್ನು ಪೂರ್ವ ಸಂಸ್ಕೃತಿಗಳಾದ ಈಜಿಪ್ಟ್, ಚಾಲ್ಡಿಯಾ, ಫಿನಿಷಿಯಾ ಮತ್ತು ಭಾರತದ ಅಡಿಪಾಯದ ಮೇಲೆ ಕಟ್ಟಿಕೊಂಡು ಕಾಲಾಂತರದಲ್ಲಿ ಸ್ಥಳೀಯ ಗ್ರೀಕ್ ಮತ್ತು ರೋಮನ್‌ರ ಸ್ಥಳೀಯ ಚೇತನ ಮತ್ತು ಮನೋಧರ್ಮ, ವಿಶಿಷ್ಟವಾದ ಬುದ್ಧಿಶಕ್ತಿ ಮತ್ತು ಅಸಾಧಾರಣ ಸಾಮಾಜಿಕ ಪ್ರತಿಭೆಯ ಮೂಲಕ ಹೊಸ ದಿಕ್ಕಿನತ್ತ ಹೊರಳಿ ಬೇರೊಂದು ಜೀವನ-ಕಲ್ಪನೆಯನ್ನು ಅಳವಡಿಸಿಕೊಂಡು, ಕಳೆದುಕೊಂಡು, ಪುನಃ ಹೆಚ್ಚು ವ್ಯಾಪಕವಾಗಿ ತನ್ನದೇ ಆದ ನವೋದಯದಿಂದ, ಪಶ್ಚಿಮ ಏಷ್ಯ ಮತ್ತು ಭಾರತದ ಹೊಸ ಚಿಂತನೆಗಳೊಂದಿಗೆ ಭಾಗಶಃ ಅರಬ್ ದೇಶಗಳಿಂದಲೂ ಮರಳಿ ಪಡೆಯಿತು. ಆದರೆ ನಂತರವೂ ಕೂಡ ಸ್ಥಳೀಯ ಟ್ಯೂಟಾನಿಕ್, ಹಾಗೂ ಲ್ಯಾಟಿನ್, ಸೆಲ್ಟಿಕ್ ಮತ್ತು ಸ್ಲಾವ್ ಜನಾಂಗಗಳ ಸ್ಥಳೀಯ ಚೇತನ ಮತ್ತು ಮನೋಧರ್ಮ, ವಿಶಿಷ್ಟವಾದ ಬುದ್ಧಿಶಕ್ತಿ ಮತ್ತು ಅಸಾಧಾರಣ ಸಾಮಾಜಿಕ ಪ್ರತಿಭೆಗೆ ಸರಿಹೊಂದುವ ದಿಕ್ಕಿನೆಡೆಗೆ ಹೊಸ ತಿರುವನ್ನು ನೀಡಿತು. ಹೀಗೆ ಸೃಷ್ಟಿಯಾದ ನಾಗರಿಕತೆಯು ತಾನು ಮನುಷ್ಯನ ಪ್ರಜ್ಞೆಯ ಅಂತಿಮ ಅಭಿವ್ಯಕ್ತಿ ಎಂದು ಮತ್ತು ಮಾನವಕುಲದ ಪ್ರಗತಿಗೆ ಅನಿವಾರ್ಯವೆಂದು ನಂಬಿದೆ. ಆದರೆ ಏಶಿಯಾದ ದೇಶಗಳು ಇದನ್ನು ಒಪ್ಪಿಕೊಳ್ಳಬೇಕಿಲ್ಲ; ಬದಲಿಗೆ ಯುರೋಪ್‌ನ ಕೊಡುಗೆಗಳೆಂದು ಹೊಸ ಜ್ಞಾನ, ಅಥವಾ ನ್ಯಾಯಬದ್ಧ ವಿಚಾರಗಳನ್ನು ತೆಗೆದುಕೊಂಡು, ತಮ್ಮದೇ ಆದ ಜ್ಞಾನ ಮತ್ತು ಸಂಸ್ಕೃತಿಗಳಲ್ಲಿ, ತಮ್ಮದೇ ಆದ ಸ್ಥಳೀಯ ಮನೋಧರ್ಮ ಮತ್ತು ಚೇತನ, ಮನಸ್ಸು ಮತ್ತು ಅಸಾಧಾರಣ ಸಾಮಾಜಿಕ ಪ್ರತಿಭೆಗಳಲ್ಲಿ ಅವುಗಳನ್ನು ಅರಗಿಸಿಕೊಂಡು, ಆ ಮೂಲಕ ಭವಿಷ್ಯತ್ತಿನ ನಾಗರಿಕತೆಯನ್ನು ನಿರ್ಮಿಸಬಲ್ಲುದಾದರೆ ಅದು ಹೆಚ್ಚಿನ ಯಶಸ್ಸನ್ನು ಸಾಧಿಸಬಹುದು. ಪಾಶ್ಚಾತ್ಯದ ವೈಜ್ಞಾನಿಕ, ವೈಚಾರಿಕ, ಕೈಗಾರಿಕಾ, ಹುಸಿ-ಪ್ರಜಾಪ್ರಭುತ್ವ ನಾಗರಿಕತೆಯು ಅವನತಿಯ ಹಂತದಲ್ಲಿದೆ. ಇಂಥ ಹೊತ್ತಿನಲ್ಲಿ ಮುಳುಗುತ್ತಿರುವ ಅಡಿಪಾಯದ ಮೇಲೆ ನಮ್ಮದನ್ನು ಅಂಧಶ್ರದ್ಧೆಯಿಂದ ಕಟ್ಟುವುದು ಹುಚ್ಚುತನ ಮತ್ತು ಅಸಂಗತವಾಗುತ್ತದೆ. ಪಶ್ಚಿಮವು

ಮಹತ್ವದ ಬದಲಾವಣೆಗಳನ್ನು ಎದಿರಿಸುತ್ತಿರುವ ಸಮಯದಲ್ಲಿ ಪಾಶ್ಚಾತ್ಯದ ಬಹುಪಾಲು ಪ್ರಗತಿಶೀಲ ಮನಸ್ಸುಗಳು ಹೊಸ ಭರವಸೆ ಮತ್ತು ಹೆಚ್ಚು ಆಧ್ಯಾತ್ಮಿಕ ನಾಗರಿಕತೆಗಾಗಿ ಅಸಾಧಾರಣ ಪ್ರತಿಭೆ ಹೊಂದಿರುವ ಏಶಿಯಾದೆಡೆ ನೋಡುತ್ತಿರುವಾಗ, ನಮ್ಮ ತನ್ನತನ ಮತ್ತು ಸಾಮರ್ಥ್ಯಗಳನ್ನು ಅಲಕ್ಷಿಸಿ, ದುರ್ಬಲಗೊಳ್ಳುತ್ತಿರುವ ಯುರೋಪಿನ ಸತ್ತ್ವಹೀನ ಭೂತದಲ್ಲಿ ವಿಶ್ವಾಸವಿಡುವುದಕ್ಕಿಂತ ಹೆಚ್ಚು ವಿಚಿತ್ರವೆನಿಸುವುದು ಮತ್ತೊಂದಿಲ್ಲ.

ಕೊನೆಯದಾಗಿ, ಆಕ್ಷೇಪಣೆಯು ಮನುಷ್ಯನ ಮನಸ್ಸು ಎಲ್ಲೆಡೆಯು ಒಂದೇ ತೆರನಾಗಿದೆ; ಹೀಗಾಗಿ ಅದನ್ನು ಒಂದೇ ತೆರನಾಗಿ ರೂಪಿತವಾದ ವ್ಯವಸ್ಥೆಯ ಮೂಲಕ ಹಂತಗಳಲ್ಲಿ ದಾಟಿ ಒಂದೇ ತೆರನಾಗಿ ಆ ಮನಸ್ಸನ್ನು ರೂಪಿಸಬಹುದು ಎಂಬ ಅಂತರ್ನಿಹಿತ ವಿಚಾರದಲ್ಲಿ ನೆಲೆಗೊಂಡದ್ದಾಗಿದೆ. ಇದು ವೈಚಾರಿಕತೆಯ ಹಳೆಯ ಮತ್ತು ಸತ್ವಹೀನ ಮೂಢನಂಬಿಕೆಯಾಗಿದ್ದು ಇದನ್ನು ಕೈಬಿಡುವ ಸಮಯ ಈಗ ಬಂದಿದೆ. ಏಕೆಂದರೆ, ಒಂದು ಸಾರ್ವತ್ರಿಕ ಮನಸ್ಸು ಮತ್ತು ಮಾನವಕುಲದ ಆತ್ಮದಲ್ಲಿ ಅನಂತ ವೈವಿಧ್ಯತೆ, ಸಾಮಾನ್ಯತೆ ಮತ್ತು ಅಪೂರ್ವತೆಯೊಂದಿಗೆ ವ್ಯಕ್ತಿಯ ಮನಸ್ಸು ಮತ್ತು ಆತ್ಮವಿದೆ. ಇವೆರಡರ ನಡುವೆ ರಾಷ್ಟ್ರದ ಮನಸ್ಸು, ಜನತೆಯ ಆತ್ಮ ಎಂಬ ಮಧ್ಯಂತರ ಶಕ್ತಿ ಇದೆ. ಶಿಕ್ಷಣವು ಒಂದು ಯಾಂತ್ರಿಕ ಆಧಾರದ ರಚನೆ ಆಗಿರದೆ ಒಂದು ಸರಿಯಾದ ಅಥವಾ ಮನುಷ್ಯನ ಮನಸ್ಸು ಮತ್ತು ಚೈತನ್ಯವನ್ನು ಪ್ರಚೋದಿಸುವ ರಚನೆಯಾಗಿರಬೇಕೆಂದರೆ ಅದು ಈ ಮೂರನ್ನೂ ಗಣನೆಗೆ ತೆಗೆದುಕೊಳ್ಳಬೇಕಾದ ಅವಶ್ಯಕತೆಯಿದೆ.

**2**

ರಾಷ್ಟ್ರೀಯ ಶಿಕ್ಷಣ ಎಂಬ ಕಲ್ಪನೆಗೆ ಒಡ್ಡಿದ ಈ ಪ್ರಾರಂಭಿಕ ಆಕ್ಷೇಪಣೆಗಳನ್ನು ಮತ್ತು ಅವು ವಿರೋಧಿಸುವ ತಪ್ಪು ಕಲ್ಪನೆಗಳನ್ನು ತೆಗೆದುಹಾಕಿದ ಬಳಿಕವೂ, ರಾಷ್ಟ್ರೀಯ ಶಿಕ್ಷಣದ ವಿಚಾರದ ಕುರಿತು ನಾವು ಏನು ಅರ್ಥ ಮಾಡಿಕೊಂಡಿದ್ದೇವೆ, ಭಾರತದಲ್ಲಿ ರಾಷ್ಟ್ರೀಯ ಶಿಕ್ಷಣಕ್ಕೆ ಬೇಕಾದ ಮೂಲ ತತ್ವ ಮತ್ತು ಪಡೆದುಕೊಳ್ಳಬೇಕಾದ ರೂಪ, ಅದು ಏನನ್ನು ಸಾಧಿಸಬೇಕಿದೆ, ಅದನ್ನು ಸಾಧಿಸಲು ಅನುಸರಿಸಬೇಕಾದ ವಿಧಾನ, ಈ ಪ್ರಯತ್ನಕ್ಕೆ ಕೊಡಬೇಕಾದ ತಿರುವು ಏನು ಎಂಬುದನ್ನು ಇನ್ನೂ ಹೆಚ್ಚು ಸಕಾರಾತ್ಮಕವಾಗಿ ರೂಪಿಸಬೇಕಿದೆ. ನಿಜವಾದ ಕಷ್ಟ ಆರಂಭವಾಗುವುದು ಇಲ್ಲಿಯೇ. ಏಕೆಂದರೆ, ಶಿಕ್ಷಣದಲ್ಲಿ ಮಾತ್ರವಲ್ಲ, ಹೆಚ್ಚುಕಡಮೆ ಎಲ್ಲ ವಿಷಯಗಳಲ್ಲಿ ಮತ್ತು ನಮ್ಮ ಇಡೀ ಸಾಂಸ್ಕೃತಿಕ ಬದುಕಿನಲ್ಲೂ ಬಹುದೀರ್ಘ ಕಾಲದಿಂದ ರಾಷ್ಟ್ರೀಯ ಚೇತನ ಮತ್ತು ಆಲೋಚನೆಯನ್ನು ಕಡೆಗಣಿಸಿದ್ದೇವೆ. ಅದನ್ನು ಮರಳಿ ಪಡೆಯಲು ನಮ್ಮನ್ನು ಸಶಕ್ತಗೊಳಿಸುವ ದೃಷ್ಟಿ ಅಥವಾ ಸ್ಪಷ್ಟ, ಗಟ್ಟಿಯಾದ ಮತ್ತು ಆಳವಾದ ಆಲೋಚನೆ ಮಾಡುವ ಯಾವುದೇ ಪ್ರಯತ್ನ ಇದುವರೆಗೂ ಆಗಿಲ್ಲ; ಆದುದರಿಂದ ಸ್ಪಷ್ಟವಾದ ಒಪ್ಪಂದ ಇಲ್ಲದಿದ್ದರೂ ನಿರ್ಣಾಯಕ ಅಂಶಗಳ ಬಗ್ಗೆ, ಸಾಧನಗಳ ಬಗ್ಗೆ ಭಿನ್ನಾಭಿಪ್ರಾಯ ಕೂಡ ಇಲ್ಲವಾಗಿದೆ. ಬಹಳ ಎಂದರೆ ತೀವ್ರ ಭಾವನಾತ್ಮಕತೆ ಮತ್ತು ಸಾಮಾನ್ಯವಾದ ಆದರೆ, ಆಕಾರಹೀನ ಕಲ್ಪನೆ ಮತ್ತು ಆ ಭಾವನಾತ್ಮಕತೆಗೆ ತಕ್ಕ ಉತ್ಸಾಹ ಇವುಗಳಷ್ಟಕ್ಕೇ ತೃಪ್ತರಾಗಿದ್ದೇವೆ. ನಮ್ಮ ಬೌದ್ಧಿಕ ಸಾಂಗತ್ಯಗಳು, ಹವ್ಯಾಸಗಳು ಅಥವಾ ಹುಚ್ಚಾಟಗಳಿಗೆ ಆಕಸ್ಮಿಕವಾಗಿ ಒಪ್ಪಿಗೆಯಾಗುವಂಥ ಅಸ್ತವ್ಯಸ್ತವಾಗಿ ಅನ್ವಯವಾಗುವ ರೂಪ ಕೊಟ್ಟಿದ್ದೇವೆ. ವಾಸ್ತವಿಕ ಅಥವಾ ಶಾಶ್ವತವಾದ ಯಾವುದೇ ಯಶಸ್ಸು ಇದರ ಫಲವಾಗಿರದೇ, ಅಧಿಕತಮ ಗೊಂದಲ ಮತ್ತು ವೈಫಲ್ಯವೇ ಇದರ ಫಲವಾಗಿದೆ. ಈಗಿನ ಮೊಟ್ಟಮೊದಲ ಅಗತ್ಯವೆಂದರೆ, ರಾಷ್ಟ್ರೀಯ ಚೇತನ, ಮನೋಧರ್ಮ, ವಿಚಾರ, ಅಗತ್ಯತೆಯು, ಶಿಕ್ಷಣದ ಮೂಲಕ ನಮ್ಮಿಂದ ಏನ್ನನ್ನು ಬೇಡುತ್ತಿದೆ ಎಂಬುದನ್ನು ನಮ್ಮ ಮನಸ್ಸಿಗೆ ನಾವೇ ಸ್ಪಷ್ಟಪಡಿಸಿಕೊಂಡು, ಆ ಸ್ಪಷ್ಟತೆಯನ್ನು ಸಮಸ್ಯೆಯ ಬೇರೆಬೇರೆ ಅಂಶಗಳಿಗೆ ಔಚಿತ್ಯಪೂರ್ಣವಾಗಿ ಅನ್ವಯಿಸುವುದು. ಇದನ್ನು ಸಾಧಿಸಿದ ಬಳಿಕವಷ್ಟೇ ಸದ್ಯದ ದೋಷಪೂರಿತ, ಖಾಲಿ ಮತ್ತು ಯಾಂತ್ರಿಕ ಶಿಕ್ಷಣವನ್ನು, ಕಳಪೆ ಮತ್ತು ನಿರರ್ಥಕ ಅವ್ಯವಸ್ಥೆಯ ಅಥವಾ ಹೊಸ ಯಾಂತ್ರಿಕ ತಪ್ಪು ಕಲ್ಪನೆಗಿಂತ ಸ್ವಲ್ಪ ಉತ್ತಮ

ಮಟ್ಟದ ಒಂದು ನಿಜವಾದ, ಕ್ರಿಯಾತ್ಮಕ ಹಾಗೂ ಭಾವೀ ಭಾರತೀಯ ಪೌರುಷದ ಸೃಜನಶೀಲ ಶಿಕ್ಷಣದಿಂದ ಬದಲಾಯಿಸಲು ಸ್ವಲ್ಪ ಆತ್ಮವಿಶ್ವಾಸ, ಪ್ರಯೋಜನ ಹಾಗೂ ಯಶಸ್ಸಿಗೆ ಅವಕಾಶದಿಂದ ಕೂಡಿದ ಭರವಸೆಯನ್ನು ಹೊಂದಬಹುದು.

ಆದರೆ, ನಿಜವಾದ ಶಿಕ್ಷಣ, ಅದರ ಒಳಾರ್ಥ, ಮೂಲಭೂತ ಗುರಿ ಮತ್ತು ಮಹತ್ವದ ಬಗೆಗೆ ನಮ್ಮೊಳಗಿರುವ ಅಸ್ಪಷ್ಟತೆಗಳಿಂದ ಮೊದಲು ನಾವು ಹೊರಬರುವ ಅಗತ್ಯವಿದೆ. ಹಾಗೆ ಮಾಡಿದಾಗ ಮಾತ್ರವೇ ನಮ್ಮ ಆರಂಭದ ಬಗ್ಗೆ ಖಚಿತವಾಗಿರಬಹುದು ಮತ್ತು ಆನಂತರ ಪರಿಕಲ್ಪನೆಗಳ ಬಗೆಗೆ ನಿಖರತೆ ಮೂಡಿ, ಆ ಪದಕ್ಕೆ ನಾವು ಕೊಡಲು ಪ್ರಯತ್ನಿಸುತ್ತಿರುವ ವಿಶೇಷಣದ ಸಂಪೂರ್ಣ ಪ್ರಸ್ತುತತೆ ಮತ್ತು ನ್ಯಾಯಯುತ ಸ್ಥಾನವನ್ನು ಭದ್ರಪಡಿಸಿ ದೃಢ ಸಂಕಲ್ಪದೊಂದಿಗೆ ಮುಂದುವರೆಯಲು ಶಕ್ತರಾಗಬಲ್ಲೆವು. ರಾಷ್ಟ್ರೀಯ ಶಿಕ್ಷಣ ಎಂದರೇನು ಅಥವಾ ಏನಿರಬೇಕು ಎಂಬುದರ ಸ್ಪಷ್ಟ ಅರಿವು ಪಡೆಯುವ ಮೊದಲು, ಶಿಕ್ಷಣ ಎಂದರೇನು ಅಥವಾ ಅದು ಏನಿರಬೇಕು ಎಂಬುದರ ಬಗ್ಗೆ ಸ್ಪಷ್ಟತೆಯನ್ನು ನಾನು ಹೊಂದಿರಬೇಕು. ಹಾಗಿದ್ದರೆ, ನಿಜ ಮತ್ತು ಕ್ರಿಯಾತ್ಮಕವಾದ ಶಿಕ್ಷಣದಲ್ಲಿ ಮನುಷ್ಯ, ವ್ಯಕ್ತಿಯ ಸಾಮಾನ್ಯತೆ ಹಾಗೂ ವಿಶೇಷತೆ, ರಾಷ್ಟ್ರ ಅಥವಾ ಜನತೆ ಮತ್ತು ಸಾರ್ವತ್ರಿಕ ಮಾನವಕುಲ ಈ ಮೂರು ವಿಷಯಗಳು ಪರಿಗಣಿತವಾಗಬೇಕು ಎಂಬುದರ ಬಗ್ಗೆ ಗಂಭೀರ ಭಿನ್ನಾಭಿಪ್ರಾಯಗಳಿರಲು ಸಾಧ್ಯವಿಲ್ಲ ಎಂದು ನಾನು ಭಾವಿಸುವ ನಮ್ಮ ಮೊದಲ ಹೇಳಿಕೆಯೊಂದಿಗೆ ಆರಂಭಿಸೋಣ. ಒಬ್ಬ ವ್ಯಕ್ತಿಯಲ್ಲಿ ಅಡಗಿರುವ ಮಾನವ ಜೀವನದ ಸಾಮರ್ಥ್ಯ ಮತ್ತು ಉದ್ದೇಶದ ಪೂರ್ಣ ಅಭಿವ್ಯಕ್ತಿಗೆಂದು ಸಿದ್ಧಗೊಳಿಸುವ ಹಾಗೂ ಆತನ ಪೂರ್ಣ ಪ್ರಯೋಜನವನ್ನು ಹೊರತರಲು ಸಹಾಯ ಮಾಡುವ, ಅದೇ ವೇಳೆ ಅವನು ಸೇರಿರುವ ಜನಸಮುದಾಯದ ಜೀವನ, ಮನಸ್ಸು, ಆತ್ಮದೊಂದಿಗೆ, ಮತ್ತು ಆತನೇ ಮಾನವ ಕುಲದ ಒಂದು ಭಾಗವಾಗಿರುವ ಅದರ ಮಹತ್ವವಾದ ಸಮಗ್ರ ಬದುಕು, ಮನಸ್ಸು, ಆತ್ಮ ಮತ್ತು ಜನತೆ ಅಥವಾ ರಾಷ್ಟ್ರದಿಂದ ಪ್ರತ್ಯೇಕವಾದ ಆದರೂ ಅದರಿಂದ ಬೇರ್ಪಡಿಸಲಾಗದ ಒಬ್ಬ ಸದಸ್ಯನಾಗಿ ತನ್ನದೇ ಆದ ಸರಿಯಾದ ಸಂಬಂಧವನ್ನು ಕಟ್ಟಿಕೊಳ್ಳಲು ಸಹಾಯ ಮಾಡುವುದೇ ನಿಜವಾದ ಮತ್ತು ಜೀವಂತ ಶಿಕ್ಷಣ ಎನ್ನುವುದೇ ಇದರ ಅರ್ಥ. ಈ ಬೃಹತ್ ಹಾಗೂ ಸಮಗ್ರ ತತ್ವದ ಬೆಳಕಿನಲ್ಲಿ ಪರ್ಯಾಲೋಚಿಸಿದಾಗಷ್ಟೇ ನಮ್ಮ ಶಿಕ್ಷಣ ಏನಾಗಿರಬೇಕು, ರಾಷ್ಟ್ರೀಯ ಶಿಕ್ಷಣದಿಂದ ನಾವು ಏನು ಸಾಧಿಸಬಯಸಿರುವುದು ಎಂಬುದರ ಸ್ಪಷ್ಟತೆ ಮೂಡಲು ಸಾಧ್ಯವಾಗುತ್ತದೆ. ಭಾರತದ ಅದೃಷ್ಟವು ಒಂದು ನಿರ್ಣಾಯಕ ತಿರುವನ್ನು ತೆಗೆದುಕೊಳ್ಳುತ್ತಿರುವ ಸಮಯದಲ್ಲಿ ಅವಳ ಸಮಗ್ರ ಶಕ್ತಿಯು ಅವಳ ಒಂದು ಅತಿದೊಡ್ಡ ಅಗತ್ಯವಾದ ವ್ಯಕ್ತಿ ಮತ್ತು ಜನತೆಯಲ್ಲಿ ಅವಳ ನಿಜವಾದ ಅಸ್ಮಿತೆಯನ್ನು ಕಂಡುಕೊಂಡು ಮರುರೂಪಿಸುವುದರೆಡೆಗೆ ನಿರ್ದೇಶಿತದ್ದಾಗಿರಬೇಕು ಮತ್ತು ಹೀಗೆ ಅವಳ ಆಂತರಿಕ ಹಿರಿಮೆಯನ್ನು ಪುನಃ ಪಡೆದು ಮಾನವ ಕುಲದಲ್ಲಿ ಅವಳಿಗೆ ಸೇರಬೇಕಾದ ಸಹಜ ಮನ್ನಣೆ, ಭಾಗ ಮತ್ತು ಸ್ಥಾನವನ್ನು ಮರಳಿ ಪಡೆಯಬೇಕು ಎಂದು ಭಾವಿಸುವ ದೂರ ದೃಷ್ಟಿ ಮತ್ತು ಅಡಿಪಾಯ ಈಗ ಇಲ್ಲಿ ಭಾರತದಲ್ಲಿ ತುಂಬ ಅಗತ್ಯವಿದೆ.

ಆದಾಗ್ಯೂ, ಮನುಷ್ಯ ಮತ್ತು ಆತನ ಜೀವನ; ರಾಷ್ಟ್ರ ಮತ್ತು ಅದರ ಜೀವನ; ಮನುಷ್ಯ ಮತ್ತು ಮಾನವಕುಲದ ಜೀವನ - ಇವುಗಳ ಬಗ್ಗೆ ತುಂಬ ವಿಭಿನ್ನವಾದ ಪರಿಕಲ್ಪನೆಗಳು ಇರುವ ಸಾಧ್ಯತೆ ಇದೆ. ಆ ವಿಭಿನ್ನ ಪರಿಕಲ್ಪನೆಗಳಿಗನುಗುಣವಾಗಿ ಶಿಕ್ಷಣದ ಬಗೆಗಿನ ನಮ್ಮ ಆಲೋಚನೆ ಹಾಗೂ ಪ್ರಯತ್ನದಲ್ಲಿಯೂ ಗಣನೀಯವಾದ ವ್ಯತ್ಯಾಸ ಇರಲು ಸಾಧ್ಯವಿದೆ. ಇವುಗಳ ಕುರಿತು ಭಾರತವು ಸದಾ ತನ್ನದೇ ಆದ ವಿಶಿಷ್ಟ ಪರಿಕಲ್ಪನೆ ಹಾಗೂ ದೃಷ್ಟಿಯನ್ನು ಹೊಂದಿದೆ. ಇದು ನಮ್ಮ ಶಿಕ್ಷಣದ ಬೇರಿನಲ್ಲಿ ಮತ್ತು ಅದಕ್ಕೊಂದು ನಿಜವಾದ ರಾಷ್ಟ್ರೀಯ ಗುಣಲಕ್ಷಣವನ್ನು ಕೊಡುವ ರೀತಿಯಲ್ಲಿ ಇರಲು ಸಾಧ್ಯತೆ ಇದೆಯೇ, ಇರುತ್ತದೆಯೇ ಅಥವಾ ಇರಬೇಕೇ ಎಂಬುದನ್ನು ನಾವು ನೋಡಲೇಬೇಕಾಗುತ್ತದೆ. ಭಾರತದ ದೃಷ್ಟಿಯು, ಮನುಷ್ಯನನ್ನು ಭೌತಿಕ ಪ್ರಕೃತಿಯಿಂದ ಅಭಿವೃದ್ಧಿ ಹೊಂದಿದ ಕೆಲವು ಮೂಲಭೂತ

ಪ್ರವೃತ್ತಿಗಳನ್ನು, ಅಹಂ, ಮನಸ್ಸು ಮತ್ತು ಬುದ್ಧಿಯ ವಿಕಸನವನ್ನು ಹೊಂದಿರುವ ಒಂದು ಜೀವಂತ ದೇಹವಾಗಿ, 'ಮಾನವ ಕುಲ (*homo genus*)'ದ ಒಂದು ಪ್ರಾಣಿಯನ್ನಾಗಿ, ನಮ್ಮ ಸಂದರ್ಭದಲ್ಲಿ 'ಹೋಮೋ ಇಂಡಿಕಸ್ (*homo indicus* - ಭಾರತದ ಮಾನವ)' ಆಗಿ ನೋಡಿಲ್ಲ; ಮನುಷ್ಯನ ಇಡೀ ಜೀವನ ಮತ್ತು ಶಿಕ್ಷಣ ಈ ಮೂಲ ಪ್ರವೃತ್ತಿಗಳನ್ನು ತರಬೇತಿ ಹೊಂದಿದ ಮನಸ್ಸು ಮತ್ತು ಬುದ್ಧಿಯ ಮಾರ್ಗದರ್ಶನದಲ್ಲಿ ತೃಪ್ತಿಪಡಿಸಿಕೊಳ್ಳುವತ್ತ ತಿರುಗಿಸಬೇಕು ಮತ್ತು ವೈಯಕ್ತಿಕ ಹಾಗೂ ರಾಷ್ಟ್ರೀಯ ಅಹಂನ ಅತ್ಯುತ್ತಮ ಉಪಯೋಗಕ್ಕಾಗಿ ಬಳಸಿಕೊಳ್ಳಬೇಕು ಎಂದು ನೋಡಿಲ್ಲ. ಮನುಷ್ಯನನ್ನು ಪ್ರಮುಖವಾಗಿ ಬುದ್ಧಿ ಇರುವ ಪ್ರಾಣಿಯೆಂದಾಗಲೀ, ಅಥವಾ ಪರಿಚಿತ ವಾಖ್ಯಾನವನ್ನು ವಿಸ್ತರಿಸುತ್ತ, ಒಂದು ವಿಚಾರವನ್ನು, ಭಾವನೆಯನ್ನು ಮತ್ತು ಸ್ವ ಇಚ್ಛೆಯ ಸಹಜ ಅಸ್ತಿತ್ವ ಹೊಂದಿರುವ, ಭೌತಿಕ ಪ್ರಕೃತಿಯ ಮನೋಪುತ್ರ ಮತ್ತು ಅವನ ಶಿಕ್ಷಣವು ಈ ಮನೋ ಸಾಮರ್ಥ್ಯಗಳ ಕೃಷಿ ಮಾಡುವುದು ಎಂದಾಗಲೀ ಅಥವಾ ಇವನನ್ನು ಒಬ್ಬ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಅಸ್ತಿತ್ವ ಹೊಂದಿರುವ ಜೀವಿ ಎಂದು ವ್ಯಾಖ್ಯಾನಿಸಿ, ಅವನ ಶಿಕ್ಷಣವು ಅವನನ್ನು ಸಮಾಜದ ಹಾಗೂ ಪ್ರಭುತ್ವದ ಒಬ್ಬ ಸಮರ್ಥ, ಉತ್ಪಾದಕ ಮತ್ತು ತುಂಬ ಉತ್ತಮ ಶಿಸ್ತಿನ ಸದಸ್ಯನನ್ನಾಗಿ ರೂಪಿಸಲು ಇರುವ ಒಂದು ತರಬೇತಿ ಎಂದಾಗಲೀ ನೋಡಿಲ್ಲ. ಇವೆಲ್ಲವೂ ಮನುಷ್ಯನ ಮುಖಗಳು ಎಂಬುದರಲ್ಲಿ ಅನುಮಾನವಿಲ್ಲ ಮತ್ತು ಭಾರತವು ಅವುಗಳಿಗೆ ತನ್ನ ದೃಷ್ಟಿಗೆ ಅನುಗುಣವಾಗಿ ಗಣನೀಯವಾದ ಪ್ರಾಮುಖ್ಯತೆಯನ್ನು ನೀಡಿದೆ ಕೂಡ. ಆದರೆ ಅವುಗಳೆಲ್ಲವೂ ಬಾಹ್ಯ ಸಂಗತಿಗಳು; ಮನುಷ್ಯನ ಮನಸ್ಸು, ಜೀವನ, ಕ್ರಿಯೆಗಳ ಸಾಧನ ಸಂಚಯಗಳು ಎಂದು ಪರಿಗಣಸಲಾಗಿದೆಯೇ ವಿನಃ ಅವುಗಳೇ ಪೂರ್ಣ ಅಥವಾ ನಿಜವಾದ ಮನುಷ್ಯ ಎಂದಲ್ಲ.

ಭಾರತವು ಯಾವಾಗಲೂ ಒಂದು ವ್ಯಕ್ತಿಯಾದ ಮನುಷ್ಯನಲ್ಲಿ, ಮನಸ್ಸು ಮತ್ತು ದೇಹದಲ್ಲಿ ಒಂದು ಅತಿ ಶ್ರೇಷ್ಠ ಭಾಗವಾಗಿ ಅಡಗಿರುವ, ಪ್ರಕೃತಿಯಲ್ಲಿ ಸಾರ್ವತ್ರಿಕ ಹಾಗೂ ಚೈತನ್ಯದ ಪ್ರಜ್ಞಾಪೂರ್ಣ ಅಭಿವ್ಯಕ್ತಿಯಾಗಿರುವ ಒಂದು ಆತ್ಮವನ್ನು ಕಂಡಿದೆ. ಭಾರತವು ಆತನಲ್ಲಿ ಮಾನಸಿಕ, ಬೌದ್ಧಿಕ, ನೈತಿಕ, ಚಲನಶೀಲ ಮತ್ತು ವಾಸ್ತವಿಕ, ಸೌಂದರ್ಯಪ್ರಜ್ಞೆಯ ಮತ್ತು ಭೋಗೈಕ ದೃಷ್ಟಿಯುಳ್ಳ, ಪರಮೋಚ್ಚ ಮತ್ತು ಭೌತಿಕ ಅಸ್ತಿತ್ವವನ್ನು ಗುರುತಿಸಿದೆ ಹಾಗೂ ಬೆಳೆಸಿದೆ. ಆದರೆ, ಇವುಗಳನ್ನು ಆತ್ಮದ ಶಕ್ತಿಗಳೆಂದು ಮತ್ತು ಅದು ಅವುಗಳ ಮೂಲಕ ವ್ಯಕ್ತಗೊಳ್ಳುವ, ಅವುಗಳ ಬೆಳವಣಿಗೆಯ ಜೊತೆಗೆ ಬೆಳೆಯುವುದೆಯಾದರೂ ಅವುಗಳು ಸಂಪೂರ್ಣವಾಗಿ ಆತ್ಮವಲ್ಲ ಎಂದು ಪರಿಗಣಿಸಲಾಗಿದೆ. ಏಕೆಂದರೆ ಇವುಗಳ ಮೂಲಕ ರೂಪು ತಳೆಯುವ ಅದು, ತನ್ನ ಉನ್ನತ ಶಿಖರದಲ್ಲಿ ಇವೆಲ್ಲವುಗಳಿಗಿಂತ ಮಹಾನ್ ಆಗಿ, ಆಧ್ಯಾತ್ಮಿಕ ಅಸ್ತಿತ್ವವಾಗಿ ಹೊರಹೊಮ್ಮುತ್ತದೆ. ಇದರಲ್ಲಿ ಭಾರತವು ಮನುಷ್ಯನ ಆತ್ಮದ ಅತ್ಯುನ್ನತ ರೂಪುಧಾರಣೆಯನ್ನು, ಅವನ ಆತ್ಯಂತಿಕ ದೈವಿಕ ಪೌರುಷತ್ವವನ್ನು-ಆತನ 'ಪಾರಮಾರ್ಥವನ್ನು' ಮತ್ತು ಅತ್ಯುನ್ನತ 'ಪುರುಷಾರ್ಥವನ್ನು' ಕಂಡುಕೊಂಡಿದೆ. ಅಂತೆಯೇ, ಭಾರತವು ಒಂದು ರಾಷ್ಟ್ರ ಅಥವಾ ಜನತೆ ಎಂದರೆ ಒಂದು ಸಂಘಟಿತವಾದ ಪ್ರಭುತ್ವ ಅಥವಾ ಜೀವನವನ್ನು ಎದುರಿಸಲು ಚೆನ್ನಾಗಿ ಸಿದ್ಧವಾಗಿರುವ ಹಾಗೂ ಎಲ್ಲವನ್ನೂ ರಾಷ್ಟ್ರೀಯ ಅಹಂನ – ಇದು ರಾಷ್ಟ್ರೀಯ ಪುರುಷನನ್ನು ಮರೆಮಾಡಿ ಪ್ರತಿಬಂಧಿಸುವ ಕಬ್ಬಿಣ ರಕ್ಷಾಕವಚದ ಮಾರುವೇಷ ಮಾತ್ರ - ಸೇವೆಯಲ್ಲಿ ಸಮರ್ಪಿತವಾಗಿರುವ ಒಂದು ಸಶಸ್ತ್ರ, ಸಮರ್ಥ ಸಮೂಹ ಎಂದು ಅರ್ಥ ಮಾಡಿಕೊಂಡಿಲ್ಲ. ಬದಲಾಗಿ, ಅಖಂಡತ್ವದಲ್ಲಿ ಮೈದಳೆದಿರುವ ಮಹಾನ್ ಸಾಮೂಹಿಕ ಆತ್ಮ ಮತ್ತು ಜೀವನವಾಗಿದ್ದು ಅದು ತನ್ನದೇ ಆದ ಸ್ವಭಾವ ಮತ್ತು ಅದರ ನಿಯಮ - ಸ್ವಭಾವ ಮತ್ತು ಸ್ವಧರ್ಮದ ಅಭಿವ್ಯಕ್ತಿಯಾಗಿದೆ; ಮತ್ತು ಅದು ತನ್ನ ಬೌದ್ಧಿಕ, ಸೌಂದರ್ಯಪ್ರಜ್ಞೆಯ, ನೈತಿಕ, ಚಲನಶೀಲ, ಸಾಮಾಜಿಕ ಮತ್ತು ರಾಜಕೀಯ ಸ್ವರೂಪಗಳಲ್ಲಿ ಹಾಗೂ ಸಂಸ್ಕೃತಿಯಲ್ಲಿ ಮೈದಾಳಿದೆ. ಹಾಗೆಯೇ ನಮ್ಮ ಮಾನವತ್ವದ ಸಾಂಸ್ಕೃತಿಕ ಪರಿಕಲ್ಪನೆಯು, ಮಾನವ ಕುಲದಲ್ಲಿ ಅಭಿವ್ಯಕ್ತವಾಗುವ, ಜೀವನ ಮತ್ತು ಮನಸ್ಸಿನ ಮೂಲಕ ಅತ್ಯುನ್ನತ ಆಧ್ಯಾತ್ಮಿಕ ಗುರಿಯೊಂದಿಗೆ ವಿಕಾಸ ಹೊಂದುವ

ಸಾರ್ವತ್ರಿಕವಾದ ಆಕೆಯ ಪ್ರಾಚೀನ ದೃಷ್ಟಿಗೆ ತಕ್ಕಂತೆ ಇರಬೇಕು. ಅದು ತನ್ನ ಅನೇಕ ಜನಸಮೂಹದ ವಿವಿಧ ಸಂಸ್ಕೃತಿ ಮತ್ತು ಜೀವನೋದ್ದೇಶಗಳ ಮೂಲಕ ತನ್ನ ಅನುಭವವನ್ನು ಹೆಚ್ಚಿಸಿಕೊಳ್ಳುತ್ತ ಅತ್ಯಗತ್ಯವಾದ ವೈವಿಧ್ಯತೆಯನ್ನು ಕಾಪಾಡಿಕೊಳ್ಳುವ, ವ್ಯಕ್ತಿಯ ಸಾಮರ್ಥ್ಯಗಳ ಅಭಿವೃದ್ಧಿ ಮತ್ತು ಅವನ ಅತಿ ಶ್ರೇಷ್ಠ ಸ್ವರೂಪ ಮತ್ತು ಜೀವನದೆಡೆ ಪ್ರಗತಿ ಸಾಧಿಸುವ ಮೂಲಕ ಪರಿಪೂರ್ಣತೆಯನ್ನು ಹುಡುಕುವ, ಮತ್ತು ಅದೇ ರೀತಿ ಜನಾಂಗದ ಜೀವನದಲ್ಲಿ, ಆದರೆ ಹೆಚ್ಚು ನಿಧಾನವಾಗಿ ಪರಿಪೂರ್ಣತೆಯನ್ನು ಅನುಭವಿಸಿದ ನಂತರ ಪ್ರಯತ್ನ ಮತ್ತು ಏಕಾಭಿಪ್ರಾಯದ ಮೂಲಕ ಏಕತೆಯನ್ನು ಸಾಧಿಸುವುದರೆಡೆಗೆ ಚಲಿಸುತ್ತಿರುವ ಮಾನವಕುಲದ ಆತ್ಮ ಮತ್ತು ಚೈತನ್ಯದ ಕಲ್ಪನೆಯಾಗಿರಬೇಕು. ಇದು ಮನುಷ್ಯನ ಮತ್ತು ರಾಷ್ಟ್ರದ ನಿಜವಾದ ವಿವರಣೆ ಹೌದೋ ಅಲ್ಲವೋ ಎಂಬುದನ್ನು ಕುರಿತು ವಿವಾದವಿರಬಹುದು. ಆದರೆ, ಇದು ನಿಜವಾದ ವಿವರಣೆ ಹೌದು ಎಂದು ಒಂದು ಸಲ ಒಪ್ಪಿಕೊಂಡರೆ, ಮನುಷ್ಯನ ಹಾಗೂ ರಾಷ್ಟ್ರದ ಮನಸ್ಸು - ದೇಹದಲ್ಲಿ ಈ ಚೈತನ್ಯದ ಕ್ರಿಯಾತ್ಮಕತೆಗೆ ಸಾಧನವಾಗಿರುವ ಶಿಕ್ಷಣ ಮಾತ್ರ ನಿಜವಾದ ಶಿಕ್ಷಣ ಎಂಬುದನ್ನು ಒಪ್ಪಬೇಕಾಗುತ್ತದೆ. ಇದುವೇ ನಾವು ಕಟ್ಟಬೇಕಿರುವ ಆಧಾರ ತತ್ವ, ಪ್ರಮುಖ ಉದ್ದೇಶ ಹಾಗೂ ಮಾರ್ಗದರ್ಶಕ ಆದರ್ಶವಾಗಿರಬೇಕು. ಶಿಕ್ಷಣವು ಒಬ್ಬ ವ್ಯಕ್ತಿಗೆ ಆತನ ಆತ್ಮದ ಬೆಳವಣಿಗೆ ಮತ್ತು ಅದರ ಶಕ್ತಿ ಮತ್ತು ಸಾಧ್ಯತೆಗಳು ಅಭಿವೃದ್ಧಿ ಹೊಂದುವುದೇ ಅದರ ಮುಖ್ಯ ಉದ್ದೇಶವಾಗಿರಬೇಕು; ಅದೇ ವೇಳೆ ರಾಷ್ಟ್ರಕ್ಕೆ ಮೊಟ್ಟಮೊದಲು ರಾಷ್ಟ್ರದ ಆತ್ಮ ಮತ್ತು ಅದರ ಧರ್ಮವನ್ನು ಕಾಪಾಡಿಕೊಳ್ಳುವುದು, ಬಲಗೊಳಿಸುವುದು ಮತ್ತು ಸಮೃದ್ಧಗೊಳಿಸುವುದಾಗಿರಬೇಕು, ಮತ್ತು ಎರಡನ್ನೂ ಇಡೀ ಮಾನವ ಕುಲದ ಜೀವನ, ಮನಸ್ಸು ಹಾಗೂ ಆತ್ಮವನ್ನು ಔನ್ನತ್ಯಕ್ಕೆ ಕೊಂಡೊಯ್ಯುವ ಶಕ್ತಿಗಳನ್ನಾಗಿ ಬೆಳಸಬೇಕು. ಮನುಷ್ಯನ ಅತ್ಯುನ್ನತ ಉದ್ದೇಶವಾದ ಅವನ ಆಧ್ಯಾತ್ಮಿಕ ಸ್ವರೂಪದ ಅರಿವು ಮತ್ತು ಬೆಳವಣಿಗೆಯನ್ನು ಅದು ಯಾವ ಕಾಲಕ್ಕೂ ಕಳೆದುಕೊಳ್ಳಬಾರದು.

# ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆ

## ಕೆಲವು ಪ್ರಾಸ್ತಾವಿಕ ವಿಚಾರಗಳು

### 1924ರ ಆವೃತ್ತಿಗೆ ಬರೆದ ಪ್ರಕಾಶಕರ ನುಡಿಗಳು

ಈ ಪ್ರಬಂಧಗಳು 1910ರ `ಕರ್ಮಯೋಗಿನ್' ಪತ್ರಿಕೆಯಲ್ಲಿ ಮೊದಲು ಪ್ರಕಟಗೊಂಡಿದ್ದವು. ಆದಾಗ್ಯೂ, ಆ ಪ್ರಬಂಧಗಳು ಅಪೂರ್ಣವಾಗಿದ್ದು, ಅವುಗಳಲ್ಲಿ ರಾಷ್ಟ್ರೀಯ ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ವಿಚಾರಗಳು ಪ್ರಸ್ತಾಪವಾಗಿರುವುದನ್ನು ಹೊರತು ಪಡಿಸಿದರೆ ಅದಕ್ಕೆ ಸಂಬಂಧಿಸಿದ ವಿಷಯವನ್ನು ಈ ಪ್ರಬಂಧಗಳು ಒಳಗೊಂಡಿಲ್ಲ. ಈಗಿನ ಸ್ವರೂಪದಲ್ಲಿ ಅವುಗಳನ್ನು ಮರುಪ್ರಕಟಿಸಬೇಕು ಎಂಬುದು ಲೇಖಕರ ಉದ್ದೇಶವೂ ಆಗಿರಲಿಲ್ಲ. ಆದರೆ, ಸನ್ನಿವೇಶಗಳು ಅವುಗಳ ಅಧಿಕೃತ ಆವೃತ್ತಿಯೊಂದನ್ನು ತರುವಂತೆ ಒತ್ತಾಯಿಸಿವೆ. ಈಗ ಇರುವಂತೆ ಈ ಪುಸ್ತಕವು ಯಾವುದೇ ದೇಶದಲ್ಲಿನ ರಾಷ್ಟ್ರೀಯ ಶಿಕ್ಷಣವು ಅನ್ವಯಿಸಲೇಬೇಕಾದ ಒಂದು ಉತ್ತಮ ಬೋಧನಾ ವಿಧಾನದ ಕೆಲವು ಸಾಮಾನ್ಯ ತತ್ವಗಳಿಗೆ ಪ್ರಾಮುಖ್ಯತೆ ನೀಡುವುದರೊಂದಿಗೆ ಹಲವಾರು ಪರಿಚಯಾತ್ಮಕ ಪ್ರಬಂಧಗಳನ್ನು ಒಳಗೊಂಡಿದೆ. ವಾಸ್ತವವಾಗಿ ಇದು ಭಾರತದಲ್ಲಿನ ರಾಷ್ಟ್ರೀಯ ಶಿಕ್ಷಣದ ವಿಷಯಕ್ಕೆ ಒಂದು ಭಾಗಶಃ ಪ್ರವೇಶಿಕೆಯಾಗಿದೆ.

# I

# ಮಾನವನ ಮನಸ್ಸು

ಶಿಕ್ಷಣದ ನಿಜವಾದ ಮೂಲಾಧಾರವೆಂದರೆ ಶೈಶವ, ತಾರುಣ್ಯ ಮತ್ತು ವಯಸ್ಕ ಮನುಷ್ಯನ ಮನಸ್ಸಿನ ಅಧ್ಯಯನ ನಡೆಸುವುದು. ಶೈಕ್ಷಣಿಕವಾಗಿ ಪರಿಪೂರ್ಣವಾಗಿರುವ ಸಿದ್ಧಾಂತಗಳನ್ನು ಆಧರಿಸಿ ಸ್ಥಾಪಿತವಾದ, ಆದರೆ ಅಧ್ಯಯನದ ಸಾಧನವನ್ನು (Instrument) ಅಲಕ್ಷಿಸುವ ಯಾವುದೇ ಶಿಕ್ಷಣ ವ್ಯವಸ್ಥೆಯು, ಪರಿಪೂರ್ಣ ಹಾಗೂ ಸಂಪೂರ್ಣವಾಗಿ ಸುಸಜ್ಜಿತವಾಗಿರುವ ಮನಸ್ಸನ್ನು ಹುಟ್ಟುಹಾಕುವುದಕ್ಕಿಂತ, ಬೌದ್ಧಿಕ ಬೆಳವಣಿಗೆಯನ್ನು ಅಡ್ಡಿಪಡಿಸುವ, ಕುಂಠಿತಗೊಳಿಸುವ ಸಂಭವವೇ ಹೆಚ್ಚಿರುತ್ತದೆ. ಏಕೆಂದರೆ ಶಿಕ್ಷಕ ತಜ್ಞನು ಅಪಾರವಾದ ಸೂಕ್ಷ್ಮ ಮತ್ತು ಸಂವೇದನಾಶೀಲ ಜೀವಿಯೊಂದಿಗೆ ಕೆಲಸ ಮಾಡಬೇಕಿದೆಯೇ ವಿನಃ, ಕಲಾವಿದ ಅಥವಾ ಶಿಲ್ಪಿಯಂತೆ ಜೀವರಹಿತ ವಸ್ತುವಿನೊಂದಿಗೆ ಅಲ್ಲ. ಶಿಕ್ಷಕನು ಶೈಕ್ಷಣಿಕ ಮೇರು ಕೃತಿಯೊಂದನ್ನು ಜೀವವಿಲ್ಲದ ಮರ ಅಥವಾ ಕಲ್ಲಿನಂತಿರುವ ಮಾನವನಿಂದ ರೂಪಿಸಲಾರ; ಆತನು ಗ್ರಹಿಕೆಗೆ ನಿಲುಕದಿರುವ ಮನಸ್ಸಿನ ಸೂಕ್ಷ್ಮ ದ್ರವ್ಯದೊಂದಿಗೆ ಕೆಲಸ ಮಾಡಬೇಕಾಗುತ್ತದೆ ಮತ್ತು ಮಾನವನ ನಾಜೂಕು ದೇಹದ ರಚನೆಯು ಇರಿಸುವ ಮಿತಿಗಳನ್ನೂ ಗೌರವಿಸಬೇಕಾಗುತ್ತದೆ.

ಯುರೋಪಿನ ಸದ್ಯದ ಶೈಕ್ಷಣಿಕ ವ್ಯವಸ್ಥೆಯು ತನ್ನ ಪ್ರಾಚೀನ ಕಾಲದ ವಿಧಾನಗಳಿಗಿಂತ ಸಾಕಷ್ಟು ಮುಂದುವರಿದಿದೆ ಎಂಬುದು ನಿಜವಾದರೂ, ಅದರಲ್ಲಿನ ದೋಷಗಳೂ ಸ್ಪಷ್ಟವಾಗಿ ಎದ್ದುಕಾಣುತ್ತಿವೆ. ಆ ಶಿಕ್ಷಣವು ಮಾನವ ಮನೋವಿಜ್ಞಾನದ ಅಸಮಗ್ರ ಜ್ಞಾನದ ಮೇಲೆ ನಿಂತಿದೆ, ಮತ್ತು ಅದು ಯುರೋಪಿನಲ್ಲಿ, ಒಬ್ಬ ಸಾಮಾನ್ಯ ವಿದ್ಯಾರ್ಥಿಯು ಅದು ಒಳಗೊಳ್ಳುವ ಪ್ರಕ್ರಿಯೆಗಳಲ್ಲಿ ತನ್ನನ್ನು ಒಳಪಡಿಸಿಕೊಳ್ಳಲು ನಿರಾಕರಿಸುವುದರಿಂದ, ತನಗೊದಗುವ ಶಿಕ್ಷೆಯನ್ನು ತಪ್ಪಿಸಲೋ ಅಥವಾ ತಕ್ಷಣದ ಪರೀಕ್ಷೆಯನ್ನು ಪಾಸು ಮಾಡಲು ಎಷ್ಟು ಬೇಕೋ ಅಷ್ಟೇ ಅಧ್ಯಯನ ಮಾಡುವುದರಿಂದ, ತನ್ನನ್ನು ಸಕ್ರಿಯ ಅಭ್ಯಾಸಗಳು ಹಾಗೂ ಗಟ್ಟಿಮುಟ್ಟಾದ ಮತ್ತು ಚಟುವಟಿಕೆಯಿಂದ ಕೂಡಿದ ದೈಹಿಕ ವ್ಯಾಯಾಮದಲ್ಲಿ ತೊಡಗಿಸಿಕೊಳ್ಳುವುದರಿಂದ ಮಾತ್ರವೇ ಅನರ್ಥಕಾರಕ ಪರಿಣಾಮಗಳಿಂದಾಗುವ ಅಪಾಯವನ್ನು ತಪ್ಪಿಸಿದೆ. ದೇಹ, ಮನಸ್ಸು ಮತ್ತು ಚಾರಿತ್ರ್ಯಗಳ ಮೇಲೆ ಈ ವ್ಯವಸ್ಥೆಯ ವಿನಾಶಕಾರಿ ಪರಿಣಾಮಗಳು ಭಾರತದಲ್ಲಿ ಸುಸ್ಪಷ್ಟವಾಗಿ ಎದ್ದು ಕಾಣುತ್ತಿವೆ. ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯಲ್ಲಿನ ಮೊದಲ ಸಮಸ್ಯೆಯೆಂದರೆ ಯುರೋಪಿನ ಶಿಕ್ಷಣದ ಒತ್ತಡ ಮತ್ತು ಬಾಯಿಪಾಠಮಾಡುವುದರ ದುಷ್ಪರಿಣಾಮಗಳಿಲ್ಲದೆ, ಆ ಶಿಕ್ಷಣದಷ್ಟೇ ಸಮಗ್ರವಾದ ಆದರೇ ಇನ್ನೂ ಹೆಚ್ಚು ಸುಪರಿಷ್ಕೃತವಾದ ಶಿಕ್ಷಣವನ್ನು ಕೊಡುವುದಾಗಿದೆ. ಜ್ಞಾನ ಸಾಧನಗಳ ಅಧ್ಯಯನ ಮತ್ತು ಸಹಜ, ಸರಳ, ಪರಿಣಾಮಕಾರಿಯಾದ ಬೋಧನಾ ವಿಧಾನವನ್ನು ಕಂಡುಕೊಳ್ಳುವುದರಿಂದ ಮಾತ್ರ ಇದು ಸಾಧ್ಯವಾಗುವುದು. ಆಧುನಿಕ ಪರಿಸ್ಥಿತಿಗಳು ಬೇಡುವ ಹೆಚ್ಚಿದ ಕೆಲಸಕ್ಕೆ ಪರಿಣಾಮಕಾರಿಯಾಗಿರುವಂತೆ ಈ ಸಾಧನಗಳ ಅತ್ಯುಚ್ಚ ಸಾಮರ್ಥ್ಯಗಳನ್ನು ಬಲಗೊಳಿಸುವ ಹಾಗೂ ತೀಕ್ಷ್ಣಗೊಳಿಸುವ ಮೂಲಕ ಮಾತ್ರ ಇದನ್ನು ಸಾಧಿಸಲು ಸಾಧ್ಯ. ಮನೋಬಲಗಳನ್ನು ಸರಳ - ಸುಲಭ ವಿಧಾನಗಳ ಮೂಲಕ ಸಂಪೂರ್ಣವಾಗಿ ತರಬೇತುಗೊಳಿಸಬೇಕು; ನಂತರವೇ - ಅಲ್ಲಿಯವರೆಗೂ ಅಲ್ಲ - ಅವುಗಳಿಂದ ಬೌದ್ಧಿಕ ಶಕ್ತಿಯ ಅಗಾಧ ಸಾಧನಗಳನ್ನು ನಿರೀಕ್ಷಿಸಬಹುದಾಗುತ್ತದೆ.

ನಿಜವಾದ ಬೋಧನೆಯ ಮೊದಲನೆಯ ತತ್ವ - ಯಾವುದನ್ನೂ ಕಲಿಸಲಾಗದು ಎಂಬುದು. ಶಿಕ್ಷಕನು ಬೋಧಕನೂ (instructor) ಅಲ್ಲ, ಕೆಲಸ ತೆಗೆಯುವ ಮೇಲ್ವಿಚಾರಕನೂ (taskmaster) ಅಲ್ಲ. ವಾಸ್ತವವಾಗಿ ಅವನು ಸಹಾಯಕ ಮತ್ತು ಮಾರ್ಗದರ್ಶಕ. ಸಲಹೆಗಳನ್ನು ಸೂಚಿಸುವುದು ಅವನ ಕೆಲಸವೇ ವಿನಃ ಅವುಗಳನ್ನು ಹೇರುವುದಲ್ಲ. ವಾಸ್ತವವಾಗಿ ಶಿಕ್ಷಕನು ವಿದ್ಯಾರ್ಥಿಯ ಮನಸ್ಸನ್ನು ತರಬೇತುಗೊಳಿಸುವವನಲ್ಲ; ಬದಲಾಗಿ, ಜ್ಞಾನದ ಸಾಧನಗಳನ್ನು ಪರಿಪೂರ್ಣಗೊಳಿಸುವ ಬಗೆ ಹೇಗೆಂಬುದನ್ನು ತೋರಿಸಿಕೊಡುವವನು ಮತ್ತು ಆ ಪ್ರಕ್ರಿಯೆಯಲ್ಲಿ ಸಾಗಲು ಪ್ರೋತ್ಸಾಹಿಸುವವನು. ಸಹಾಯ ಮಾಡುವುದಷ್ಟೇ ಅವನ ಕೆಲಸ. ವಿದ್ಯಾರ್ಥಿಗೆ ಜ್ಞಾನವನ್ನು ಅವನು ಕೊಡುವುದಿಲ್ಲ; ಬದಲಾಗಿ, ಜ್ಞಾನವನ್ನು ತಾನೇ ಪಡೆಯುವುದು ಹೇಗೆ ಎಂಬುದನ್ನು ವಿದ್ಯಾರ್ಥಿಗೆ ತೋರಿಸುತ್ತಾನೆ. ವಿದ್ಯಾರ್ಥಿಯಲ್ಲಿರುವ ಜ್ಞಾನವನ್ನು ಹೊರತರುವ ಕೆಲಸವನ್ನು ಮಾಡುವುದಿಲ್ಲ; ಅದು ಎಲ್ಲಿ ಇದೆ ಮತ್ತು ಅದಕ್ಕೊಂದು ರೂಪಕೊಡಲು ಅದನ್ನು ಹೇಗೆ ರೂಢಿಸಬಹುದು ಎಂಬುದನ್ನು ತೋರಿಸುತ್ತಾನೆ ಅಷ್ಟೇ. ಈ ತತ್ತ್ವವನ್ನು ಮಕ್ಕಳಿಗೆ ಅನ್ವಯಿಸುವುದನ್ನು ನಿರಾಕರಿಸಿ ಹದಿಹರೆಯದವರು ಮತ್ತು ವಯಸ್ಕರ ಶಿಕ್ಷಣಕ್ಕೆ ಮಾತ್ರ ಅನ್ವಯಿಸುವಂತೆ ಮಾಡುವ ವ್ಯತ್ಯಾಸವು ಮರ್ರಾಡೆದುರಿ ಹಾಗೂ ಬುದ್ಧಿಹೀನ ಸಿದ್ಧಾಂತ ಎನ್ನಬಹುದು. ಮಗುವಿರಲಿ ಬೆಳೆದ ವಯಸ್ಕನೇ ಇರಲಿ, ಹುಡುಗನಿರಲಿ-ಹುಡುಗಿಯಿರಲಿ ಉತ್ತಮ ಬೋಧನಾತತ್ವ ಎಲ್ಲರಿಗೂ ಒಂದೇ. ವಯೋಮಾನದಲ್ಲಿನ ವ್ಯತ್ಯಾಸವು ಸಹಾಯ ಮತ್ತು ಮಾರ್ಗದರ್ಶನ ಅಗತ್ಯದ ಪ್ರಮಾಣವನ್ನು ಕಡಮೆಗೊಳಿಸಲು ಅಥವಾ ಹೆಚ್ಚಿಸಲು ಮಾತ್ರ ಉಪಯೋಗವಾಗುತ್ತದೆಯೇ ಹೊರತು ಅದರ ಸ್ವರೂಪ ಬದಲಾಗುವುದಿಲ್ಲ.

ಎರಡನೆಯ ತತ್ವ – ಮನಸ್ಸಿನ ಬೆಳವಣಿಗೆಯಲ್ಲಿ ಮನಸ್ಸನ್ನು ಸಮಾಲೋಚನೆಗೆ ಒಳಪಡಿಸುವುದು. ಪಾಲಕರು ಅಥವಾ ಶಿಕ್ಷಕರು ತಮ್ಮ ಆಸೆಗಳಿಗೆ ಮಣಿಹಾಕಿ ಮಗುವನ್ನು ಹೊಡೆದು ಬಡಿದು ಹಿಂಸಿಸುವ ಮೂಲಕ ರೂಪಿಸುವ ವಿಚಾರವೇ ಅತ್ಯಂತ ಅನಾಗರಿಕವೂ, ಅಜ್ಞಾನಜನ್ಯ ಮೂಢನಂಬಿಕೆಯೂ ಆಗಿದೆ. ಮಗು ತನ್ನದೇ ಆದ ಸ್ವಭಾವಕ್ಕನುಗುಣವಾಗಿ ಅರಳಲು ಪ್ರೋತ್ಸಾಹಿಸಬೇಕು. ಪಾಲಕರು ತಮ್ಮ ಮಗನು ಇಂಥವೇ ಗುಣ, ಸಾಮರ್ಥ್ಯ, ವಿಚಾರ, ಸೌಶೀಲಗಳನ್ನು ಬೆಳೆಸಿಕೊಳ್ಳಬೇಕು ಅಥವಾ ತನ್ನ ಮಗನನ್ನು ಇಂಥದೇ ಜೀವನೋಪಾಯ ಮಾರ್ಗಕ್ಕೆ ಸಿದ್ಧಗೊಳಿಸಬೇಕು ಎಂದು ಮುಂಚಿತವಾಗಿಯೇ ವ್ಯವಸ್ಥೆ ಮಾಡುವುದಕ್ಕಿಂತ ದೊಡ್ಡದಾದ ತಪ್ಪು ಇನ್ನೊಂದಿಲ್ಲ. ತನ್ನದೇ ಆದ 'ಸ್ವ-ಧರ್ಮ' ವನ್ನು ಅಲ್ಲಗಳೆಯುವಂತೆ ಸ್ವಭಾವವನ್ನು ಒತ್ತಾಯಿಸುವುದು ಅದಕ್ಕೆ ಶಾಶ್ವತವಾಗಿ ಹಾನಿ ಮಾಡಿದಂತೆ, ಅದರ ಬೆಳವಣಿಗೆಯನ್ನು ನ್ಯೂನವಾಗಿಸಿದಂತೆ ಮತ್ತು ಅದರ ಪರಿಪೂರ್ಣತೆಯನ್ನು ವಿರೂಪಗೊಳಿಸಿದಂತೆ. ಇದು ಮಾನವ ಆತ್ಮದ ಮೇಲೆ ಎಸಗುವ ಸ್ವಾರ್ಥಪೂರಿತ ದಬ್ಬಾಳಿಕೆ ಮತ್ತು ದೇಶಕ್ಕೆ ಮಾಡುವ ಗಾಯ. ಆ ಮನುಷ್ಯ ಕೊಡಬಹುದಾಗಿದ್ದ ತನ್ನ ಅತ್ಯುತ್ತಮದ ಕೊಡುಗೆಯನ್ನು ಕಳೆದುಕೊಂಡು, ಅದರ ಸ್ಥಾನದಲ್ಲಿ ಅಪರಿಪೂರ್ಣವಾದ ಮತ್ತು ಕೃತಕವಾದುದನ್ನು, ಎರಡನೇ ದರ್ಜೆಯದನ್ನು, ಕಾಟಾಚಾರದ ಮತ್ತು ಅತಿ ಸಾಮಾನ್ಯವಾದುದನ್ನು ರಾಷ್ಟ್ರವು ಒತ್ತಾಯಪೂರ್ವಕವಾಗಿ ಒಪ್ಪಿಕೊಳ್ಳುವಂತೆ ಮಾಡಿ ಅದಕ್ಕೆ ಹಾನಿಯನ್ನುಂಟುಮಾಡುತ್ತದೆ. ಪ್ರತಿಯೊಬ್ಬ ಮನುಷ್ಯನು ತನ್ನಲ್ಲಿ ತನ್ನದೇ ಆದ ಏನಾದರೊಂದು ಅತಿ ಶ್ರೇಷ್ಠವಾದುದನ್ನು, ತನ್ನ ಶಕ್ತಿ ಮತ್ತು ಪರಿಪೂರ್ಣತೆಯನ್ನು ಪ್ರದರ್ಶಿಸಲು ಅವಕಾಶವನ್ನು - ಅತ್ಯಂತ ಸಣ್ಣ ವಲಯದಲ್ಲಿಯೇ ಆಗಲಿ - ದೇವರು ನೀಡಿರುತ್ತಾನೆ; ಅದನ್ನು ಸ್ವೀಕರಿಸುವುದಾಗಲೀ ಅಥವಾ ತಿರಸ್ಕರಿಸುವುದಾಗಲೀ ಅತನಿಗೆ ಬಿಟ್ಟಿರುವುದು. ಇಲ್ಲಿನ ಪ್ರಯತ್ನವು ಅದನ್ನು ಹುಡುಕುವುದು, ಬೆಳೆಸುವುದು, ಉಪಯೋಗಿಸುವುದಾಗಿರಬೇಕು. ಬೆಳೆಯುತ್ತಿರುವ ಆತ್ಮವು ತನ್ನಲ್ಲಿರುವ ಅತ್ಯುತ್ತಮವಾದುದನ್ನು ಹೊರಹೊಮ್ಮಿಸಿ ಅದನ್ನು ಶ್ರೇಷ್ಠವಾದ ಉಪಯೋಗಕ್ಕಾಗಿ ಪರಿಪೂರ್ಣಗೊಳಿಸುವಂತೆ ಮಾಡುವುದು ಶಿಕ್ಷಣದ ಪ್ರಧಾನ ಗುರಿಯಾಗಿರಬೇಕು.

ಶಿಕ್ಷಣದ ಮೂರನೆಯ ತತ್ವ - ಹತ್ತಿರದಿಂದ ದೂರದೆಡೆಗೆ, ಇರುವುದರಿಂದ ಇರಬೇಕಾದುದರೆಡೆಗೆ ಕ್ರಿಯಾಶೀಲವಾಗುವುದು. ಮನುಷ್ಯನ ಆತ್ಮದ ಭೂತಕಾಲದ ಜೊತೆಗೆ ಆತನ ಅನುವಂಶಿಕ ಲಕ್ಷಣ, ಆತನ ಸುತ್ತಮುತ್ತಲ ಪರಿಸರಗಳು, ಆತನ ರಾಷ್ಟ್ರೀಯತೆ, ಆತನ ದೇಶ, ತನ್ನ ಜೀವನಾಧಾರವನ್ನು ಪಡೆಯುವ ಮಣ್ಣು, ಆತನು ಉಸಿರಾಡುವ ಗಾಳಿ, ಆತನಿಗೆ ಒಗ್ಗಿಹೋಗಿರುವ ದೃಶ್ಯಗಳು, ಶಬ್ದಗಳು, ಅಭ್ಯಾಸಗಳು ಬಹುಪಾಲು ಯಾವಾಗಲೂ ಮನುಷ್ಯ ಸ್ವಭಾವದ ಮೂಲಭೂತ ಅಂಶಗಳಾಗಿರುತ್ತವೆ. ನಾವು ಇಲ್ಲಿಂದ ಆರಂಭಿಸಬೇಕು. ಅವು ಆತನನ್ನು ಸಾಕಷ್ಟು ಸೂಕ್ಷ್ಮವಾಗಿಯೂ ಶಕ್ತಿಯುತವಾಗಿಯೂ ರೂಪಿಸುತ್ತವೆ. ನಾವು ಸ್ವಭಾವವನ್ನು ಅದು ಬೆಳೆಯಬೇಕಿರುವ ನೆಲದಿಂದ ಅದರ ಬೇರುಗಳನ್ನು ಕೀಳಬಾರದು; ಅಥವಾ ಭೌತಿಕವಾಗಿ ಚಲಿಸಬೇಕಿರುವ ಜೀವನವು ಅನ್ಯ ಜೀವನ ಸಂಬಂಧಿ ಕಲ್ಪನೆಗಳು, ವಿಚಾರಗಳು ಮನಸ್ಸನ್ನು ಆವರಿಸಬಾರದು. ಒಂದು ವೇಳೆ ಹೊರಗಿನಿಂದ ಯಾವುದನ್ನಾದರೂ ತಂದುಕೊಳ್ಳಬೇಕಿದ್ದರೆ ಅದನ್ನು ಸೂಚಿಸಬಹುದೇ ವಿನಃ, ಮನಸ್ಸಿನ ಮೇಲೆ ಹೇರಬಾರದು. ನೈಜ ಬೆಳವಣಿಗೆಯು ಒಂದು ಮುಕ್ತ ಮತ್ತು ಸಹಜವಾದ ಬೆಳವಣಿಗೆಯ ವಾತಾವರಣವನ್ನು ಬೇಡುತ್ತದೆ. ತಮ್ಮ ಸುತ್ತಮುತ್ತಲ ಪರಿಸರಕ್ಕೆ ವಿರುದ್ಧ ಸಹಜವಾಗಿ ಬಂಡೇಳುವ ವ್ಯಕ್ತಿತ್ವಗಳಿರುತ್ತವೆ; ಇವು ಬೇರೊಂದು ಕಾಲ ಹಾಗೂ ವಾತಾವರಣಕ್ಕೆ ಸಂಬಂಧಿಸಿರುವಂತೆ ತೋರುತ್ತದೆ. ಇಂಥ ವ್ಯಕ್ತಿತ್ವಗಳು ತಮ್ಮದೇ ದಾರಿ ಅನುಸರಿಸಲು ಸ್ವತಂತ್ರವಾಗಿರಲಿ; ಆದರೆ ಉಳಿದ ಬಹುಪಾಲು ವ್ಯಕ್ತಿತ್ವಗಳನ್ನು ಕೃತಕವಾದ ಪರಕೀಯ ಸ್ವರೂಪಗಳಾಗಿ ರೂಪಿಸಿದರೆ ಅವು ಕುಂದುತ್ತವೆ, ಟೊಳ್ಳಾಗುತ್ತವೆ, ಕೃತಕವಾಗುತ್ತವೆ. ಮಾನವಕುಲವು ಒಂದು ನಿರ್ದಿಷ್ಟ ರಾಷ್ಟ್ರಕ್ಕೆ, ಕಾಲಕ್ಕೆ, ಸಮಾಜಕ್ಕೆ ಸೇರಿರಬೇಕು; ಅವರು ಗತದ ಮಕ್ಕಳು, ವರ್ತಮಾನದ ಒಡೆಯರು ಮತ್ತು ಭವಿಷ್ಯದ ನಿರ್ಮಾತೃಗಳಾಗಬೇಕು ಎಂಬುದು ಸಹಜ ವ್ಯವಸ್ಥೆ. ಗತವು ನಮ್ಮ ಅಡಿಪಾಯ, ವರ್ತಮಾನವು ನಮ್ಮ ಸಾಮಗ್ರಿ, ಭವಿಷ್ಯವು ನಮ್ಮ ಗುರಿ ಮತ್ತು ಸೇರಬೇಕಾದ ಉನ್ನತ ಶಿಖರ. ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯಲ್ಲಿ ಈ ಪ್ರತಿಯೊಂದೂ ಅಂಶವು ನ್ಯಾಯಯುತ ಮತ್ತು ಸಹಜ ಸ್ಥಾನವನ್ನು ಹೊಂದಿರಬೇಕು.

## II

# ಮನಸ್ಸಿನ ಶಕ್ತಿಗಳು

ಶಿಕ್ಷಕ ತಜ್ಞನ ಉಪಕರಣವೆಂದರೆ ನಾಲ್ಕು ಪದರುಗಳನ್ನುಳ್ಳ ಮನಸ್ಸು ಅಥವಾ 'ಅಂತಃಕರಣ.' ಗತಕಾಲದ ಮನಸ್ಸಿನ ಅನಿಸಿಕೆಗಳ ಭಂಡಾರವಾಗಿರುವ, 'ಚಿತ್ತ' ಅಥವಾ ನೆನಪಿನ ಭಂಡಾರವು - ಇದನ್ನು ಸ್ಮರಣೆಯ ನಿರ್ದಿಷ್ಟ ಕ್ರಿಯೆಯಿಂದ ಪ್ರತ್ಯೇಕಿಸಬೇಕು - ಉಳಿದೆಲ್ಲ ಪದರುಗಳಿಗೆ ಅಡಿಪಾಯವಾಗಿದೆ. ಎಲ್ಲ ಅನುಭವಗಳು ನಿಷ್ಕ್ರಿಯ ಅಥವಾ ಸುಪ್ತಸಾಮರ್ಥ್ಯವುಳ್ಳ ನೆನಪುಗಳಾಗಿ ನಮ್ಮೊಳಗೆ ಅಡಗಿರುತ್ತವೆ; ಸಕ್ರಿಯ ನೆನಪು ಆ ಭಂಡಾರದಿಂದ ತನಗೆ ಬೇಕಿರುವುದನ್ನು ಆರಿಸಿ ತೆಗೆದುಕೊಳ್ಳುತ್ತದೆ. ಆದರೆ, ಈ ಸಕ್ರಿಯ ನೆನಪು ಸಾವಿರಾರು ವಸ್ತುಗಳನ್ನು ಒಂದೆಡೆ ಸೇರಿಸಿರುವ ಸ್ಥಳದಲ್ಲಿ ಒಂದು ನಿರ್ದಿಷ್ಟ ವಸ್ತುವನ್ನು ಹುಡುಕುತ್ತಿರುವ ಮನುಷ್ಯನಂತೆ: ಕೆಲವೊಮ್ಮೆ ಅವನಿಗೆ ಬೇಕಾದುದು ಸಿಗುವುದಿಲ್ಲ; ಅನೇಕ ವೇಳೆ, ಅವಸರದ ಹುಡುಕಾಟದಲ್ಲಿ ತನಗೆ ತಕ್ಷಣಕ್ಕೆ ಬೇಕಿಲ್ಲದ ಹಲವಾರು ವಸ್ತುಗಳು ಅವನಿಗೆ ಸಿಗುತ್ತವೆ; ಇನ್ನೂ ಕೆಲವು ಸಲ, ತನಗೆ ಸಿಕ್ಕಿರುವ ವಸ್ತು ತಾನು ನಿಜವಾಗಿ ಹುಡುಕುತ್ತಿದ್ದುದೇ ಎಂದು ತಪ್ಪು ತಿಳಿಯುತ್ತಾನೆ; ಕೈಗೆ ಎಟಕಿರುವ ವಸ್ತು ಹೀನಮೌಲ್ಯವಲ್ಲದಿದ್ದರೂ ಅಪ್ರಸ್ತುತವಾದುದ್ದಾಗಿರುತ್ತದೆ. ನಿಷ್ಕ್ರಿಯ ನೆನಪು ಅಥವಾ 'ಚಿತ್ತ' ಕ್ಕೆ ಯಾವ ತರಬೇತಿಯ ಅವಶ್ಯಕತೆಯಿಲ್ಲ. ಅದು ಸ್ವಯಂಚಾಲಿತವಾಗಿದ್ದು ತನ್ನ ಕೆಲಸಗಳನ್ನು ತಾನೇ ಸಾಕಷ್ಟು ಸಹಜವಾಗಿ ನಿಭಾಯಿಸಬಲ್ಲದು; ಉತ್ಕೃಷ್ಟವಾದ ಈ ಸಂಪುಟದಲ್ಲಿ ತನ್ನ ವ್ಯಾಪ್ತಿಯೊಳಗೆ ಬರುವಂತಹ ಅತೀ ಸಣ್ಣ ಜ್ಞಾನದ ವಿಷಯವೂ ಸುರಕ್ಷಿತವಾಗಿದ್ದು, ಸರಿಯಾದ ಸ್ಥಳದಲ್ಲಿ ಹಾನಿಯಾಗದಂತೆ ಕಾಪಾಡಲ್ಪಡುತ್ತದೆ. ಸುಧಾರಣೆಯ ಅಗತ್ಯವಿರುವುದು, ಉನ್ನತವಾಗಿದ್ದರೂ ಹೆಚ್ಚು ಪರಿಪೂರ್ಣ ಬೆಳವಣಿಗೆ ಹೊಂದಿರದ ಸಕ್ರಿಯ ನೆನಪಿನ ಕಾರ್ಯಕ್ಕೆ ಮಾತ್ರ.

ಎರಡನೆಯ ಪದರು ಮನಸ್ಸು ಅಥವಾ 'ಮನಸ್,' ನಮ್ಮ ಭಾರತೀಯ ಮನೋವಿಜ್ಞಾನದ ಅತೀಂದ್ರಿಯ ಜ್ಞಾನ. ಇದರಲ್ಲಿ ಉಳಿದ ಎಲ್ಲವೂ ಸೇರಿಕೊಳ್ಳುತ್ತವೆ. ಮನಸ್ಸಿನ ಕೆಲಸವೆಂದರೆ ಐದು ಇಂದ್ರಿಯಗಳಿಂದ ದೃಷ್ಟಿ, ಶಬ್ದ, ವಾಸನೆ, ರುಚಿ ಮತ್ತು ಸ್ಪರ್ಷಗಳಾಗಿ ಪರಿವರ್ತಿತಗೊಂಡ ವಸ್ತುಚಿತ್ರಗಳನ್ನು ಸ್ವೀಕರಿಸುವುದು ಮತ್ತು, ಪುನಃ ಅವುಗಳನ್ನು ಆಲೋಚನಾ - ಸಂವೇದನೆಗಳಾಗಿ ಪರಿವರ್ತಿಸುವುದು. ಅದು ತನ್ನದೇ ಆದ ನೇರ ಗ್ರಹಿಕೆಯ ಚಿತ್ರಗಳನ್ನು ಸ್ವೀಕರಿಸಿ ಮನಸ್ಸಿನ ಅನಿಸಿಕೆಗಳಾಗಿ ರೂಪಿಸುವುದು. ಈ ಸಂವೇದನೆಗಳು ಮತ್ತು ಅನಿಸಿಕೆಗಳು ಆಲೋಚನೆಗೆ ಬೇಕಿರುವ ಮಾಹಿತಿಗಳು, ಇವುಗಳೇ ಆಲೋಚನೆಗಳಲ್ಲ; ಆದರೆ ಆಲೋಚನೆಯು ಸಾಕಷ್ಟು ಪರಿಪೂರ್ಣ ಮಾಹಿತಿಗಳೊಂದಿಗೆ ಕೆಲಸ ಮಾಡುವುದು ತುಂಬ ಮುಖ್ಯವಾದುದು. ಆದುದರಿಂದ, ಮಗುವಿನಲ್ಲಿ ತನ್ನ ಆರು ಇಂದ್ರಿಯಗಳನ್ನು ಸರಿಯಾಗಿ ಬಳಸುವಂತೆ ಕಲಿಸುವುದು, ಅನುಪಯುಕ್ತತೆಯಿಂದ ಬೆಳವಣಿಗೆ ಕುಂಠಿತವಾಗದಂತೆ ಅಥವಾ ಬಾಧೆಗೊಳಗಾಗದಂತೆ ನೋಡಿಕೊಳ್ಳುವುದಾದರೂ, ಶಿಕ್ಷಕರ ನಿರ್ದೇಶನದಲ್ಲಿ ಅವುಗಳ ಸರಿಯಾದ ಪರಿಪೂರ್ಣತೆಗೆ ಮತ್ತು ಅವು ಸಮರ್ಥವಾಗಿರುವ ತೀವ್ರ ಆಸಕ್ತಿಯ ಸೂಕ್ಷ್ಮ ಸಂವೇದನಾಶೀಲತೆಯನ್ನು ಹೊಂದಲು ಮಗುವೇ ಸ್ವತಃ ತರಬೇತುಗೊಳಿಸುವಂತೆ ಮಾಡುವುದು ಶಿಕ್ಷಕತಜ್ಞನ ಪ್ರಥಮ ಕಾರ್ಯವಾಗುತ್ತದೆ. ಇದರೊಂದಿಗೆ, ಕ್ರಿಯಾ ಅಂಗಗಳಿAದ ಪಡೆಯಬಹುದಾದ ಸಹಾಯವೆಲ್ಲವನ್ನೂ ಸಂಪೂರ್ಣವಾಗಿ ಅನ್ವಯಿಸಬೇಕು. ಉದಾಹರಣೆಗೆ, ಕಣ್ಣು

ಕಾಣುವುದನ್ನು, ಮನಸ್ಸು ಗ್ರಹಿಸುವುದನ್ನು ಪ್ರತಿರೂಪಿಸಲು ಹಸ್ತವು ಕಲಿಯಬೇಕು. ಇಡೀ ಅಂತಃಕರಣದ ಸಂಪೂರ್ಣ ಜ್ಞಾನವನ್ನು ಪರಿಪೂರ್ಣವಾಗಿ ಅಭಿವ್ಯಕ್ತಗೊಳಿಸುವ ಹಾಗೆ ವಾಕ್‌ಶಕ್ತಿಗೆ ತರಬೇತಿ ನೀಡಬೇಕು.

ಮೂರನೆಯ ಪದರು ಬುದ್ಧಿಶಕ್ತಿ ಅಥವಾ 'ಬುದ್ಧಿ(intellect).' ಬುದ್ಧಿಯ ಬೇರೆಬೇರೆ ಭಾಗಗಳಿಂದ ಪಡೆದ ಜ್ಞಾನವನ್ನು ಕ್ರಮಬದ್ಧಗೊಳಿಸಿ ಯುಕ್ತರೀತಿಯಲ್ಲಿ ಅಳವಡಿಸುವ ನಿಜವಾದ ಉಪಕರಣವಿದು. ಶಿಕ್ಷಕನ ಉದ್ದೇಶಗಳಿಗೆ, ನಾನು ಇದುವರೆಗೆ ಹೆಸರಿಸಿರುವ ಈ ಮೂರರಲ್ಲಿ ಇದು ಅತ್ಯಂತ ಮಹತ್ವದ್ದು. ಈ ಬುದ್ಧಿಯು ಹಲವು ಕಾರ್ಯಗಳ ಸಂಯೋಜನೆಯಿಂದ ಆಗಿರುವ ಒಂದು ಅಂಗ. ಇದನ್ನು ಬಲಭಾಗದ ಕಾರ್ಯಗಳು ಮತ್ತು ಸಾಮರ್ಥ್ಯಗಳು; ಎಡಭಾಗದ ಕಾರ್ಯಗಳು ಮತ್ತು ಸಾಮರ್ಥ್ಯಗಳು ಎಂಬ ಎರಡು ಮುಖ್ಯ ವರ್ಗಗಳಲ್ಲಿ ವಿಭಾಗಿಸಲಾಗುತ್ತದೆ. ಗ್ರಹಿಕೆ, ಸೃಜನಶೀಲತೆ ಮತ್ತು ಸಂಯೋಜನೆ ಬಲಭಾಗದ ಸಾಮರ್ಥ್ಯಗಳು; ನಿರ್ಣಾಯಕ ಮತ್ತು ವಿಶ್ಲೇಷಣೆ ಎಡಭಾಗದ ಸಾಮರ್ಥ್ಯಗಳು. ವಿವೇಚನೆ, ಕಲ್ಪನಾತ್ಮಕತೆ, ನೆನಪು, ಪರಿವೀಕ್ಷಣೆ ಇವು ಬಲಭಾಗಕ್ಕೆ ಸಂಬಂಧಿಸಿವೆ; ಹೋಲಿಸುವುದು ಮತ್ತು ತಾರ್ಕಿಕತೆ ಎಡಭಾಗಕ್ಕೆ ಸಂಬಂಧಿಸಿವೆ. ವೈಶಿಷ್ಟ್ಯಗಳನ್ನು ಗುರುತಿಸುವುದು, ಹೋಲಿಸುವುದು, ವರ್ಗೀಕರಿಸುವುದು, ಸಾಮಾನ್ಯೀಕರಿಸುವುದು, ತರ್ಕಿಸುವುದು(deduce), (ಸತ್ಯಾಂಶ, ಆಧಾರ, ಮೊದಲಾದವುಗಳಿಂದ) ತೀರ್ಮಾನಕ್ಕೆ ಬರುವುದು (infer), ನಿರ್ಣಯಿಸುವುದು – ಇವು ನಿರ್ಣಾಯಕ ಸಾಮರ್ಥ್ಯಗಳು; ಇವು ತಾರ್ಕಿಕ ವೈಚಾರಿಕತೆಯ ಘಟಕದ ಭಾಗಗಳು. ಬಲಭಾಗದ ಸಾಮರ್ಥ್ಯಗಳು ಗ್ರಹಿಸುತ್ತವೆ, ಆದೇಶಿಸುತ್ತವೆ, ತಮ್ಮದೇ ರೀತಿಯಲ್ಲಿ ವಿವೇಚಿಸುತ್ತವೆ, ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುತ್ತವೆ ಮತ್ತು ಹಿಡಿದಿಟ್ಟುಕೊಂಡು ಕುಶಲತೆಯಿಂದ ಬಳಸುತ್ತವೆ. ಬಲಭಾಗದ ಮನಸ್ಸು ಜ್ಞಾನದ ಒಡೆಯ, ಎಡಭಾಗದ ಮನಸ್ಸು ಅದರ ಸೇವಕ. ಎಡಭಾಗವು ಜ್ಞಾನದ ಬಾಹ್ಯ ಸ್ವರೂಪವನ್ನು ಮಾತ್ರ ಅರಿತಿರುತ್ತದೆ, ಬಲಭಾಗವು ಜ್ಞಾನದ ಮೂಲವನ್ನೇ ಗ್ರಹಿಸುತ್ತದೆ. ಎಡಭಾಗವು ನಿರ್ಣಯಿತವಾಗಿರುವ ಸತ್ಯಕ್ಕೆ ತನ್ನನ್ನು ಸೀಮಿತಗೊಳಿಸಿಕೊಳ್ಳುತ್ತದೆ, ಬಲಭಾಗವು ಇನ್ನೂ ಆಕಾರ ತಳೆಯದಿರುವ ಅಥವಾ ನಿರ್ಣಯಿತವಾಗದಿರುವ ಸತ್ಯವನ್ನು ಗ್ರಹಿಸುತ್ತದೆ. ಮಾನವನ ವೈಚಾರಿಕತೆಯ ಸಂಪೂರ್ಣತೆಗೆ ಎರಡೂ ಭಾಗಗಳು ಅವಶ್ಯ. ಮಗುವಿನ ಶಿಕ್ಷಣವು ಅಪರಿಪೂರ್ಣ ಅಥವಾ ಪಾರ್ಶ್ವವಾಗಿರಬಾರದು ಎಂದಿದ್ದರೆ, ಬುದ್ಧಿಯ ಈ ಎಲ್ಲ ಮುಖ್ಯ ಕಾರ್ಯಗಳನ್ನು ತಮ್ಮ ಅತ್ಯುನ್ನತ ಸೂಕ್ಷ್ಮಾತಿಸೂಕ್ಷ್ಮ ಕಾರ್ಯನಿರ್ವಹಣಾ ಸಾಮರ್ಥ್ಯದ ಮಟ್ಟಕ್ಕೆ ಬೆಳೆಸಬೇಕಾಗುತ್ತದೆ.

ಸಾಮರ್ಥ್ಯದ ನಾಲ್ಕನೆಯ ಪದರವೊಂದಿದೆ. ಇದು ಮನುಷ್ಯನಲ್ಲಿ ಇನ್ನೂ ಪೂರ್ಣ ಬೆಳವಣಿಗೆ ಹೊಂದಿಲ್ಲವಾದರೂ ಕ್ರಮೇಣವಾಗಿ ವಿಸ್ತೃತ ಬೆಳವಣಿಗೆ ಮತ್ತು ಹೆಚ್ಚು ಪರಿಪೂರ್ಣ ವಿಕಾಸ ಹೊಂದುತ್ತಿದೆ. ಜ್ಞಾನದ ಈ ಅತ್ಯುನ್ನತ ಹಂತದ ವಿಶಿಷ್ಟ ಶಕ್ತಿಗಳು ನಮಗೆ ಮುಖ್ಯವಾಗಿ ಅದ್ಭುತ ಪ್ರತಿಭೆಯ ವಿದ್ಯಮಾನಗಳಿಂದ, ಅಂದರೆ ಅತಿ ಶ್ರೇಷ್ಠ ವಿವೇಚನೆ, ಅಂತರ್ಬೋಧೆಯಿಂದ ಗ್ರಹಿಸಿದ ಸತ್ಯ, ನುಡಿಯು ನೀಡುವ ಸಮಗ್ರ ಸ್ಫೂರ್ತಿ, ಒಬ್ಬ ಮನುಷ್ಯನನ್ನು ಸತ್ಯದ ಪ್ರವಾದಿಯನ್ನಾಗಿ ಮಾಡುವ, ಅನೇಕ ವೇಳೆ ಜ್ಞಾನಪ್ರಕಾಶನ ಪಡೆಯುವಷ್ಟರ ಮಟ್ಟಿಗೆ, ಜ್ಞಾನದ ನೇರ ದರ್ಶನದಿಂದ - ಗೊತ್ತಾಗುತ್ತದೆ. ಅನೇಕರು ಈ ಶಕ್ತಿಗಳನ್ನು ಅಪರಿಪೂರ್ಣವಾಗಿ ಅಥವಾ ಆಗಾಗ ಮಿಂಚಿನಂತೆ ಹೊಂದಿರುವರಾದರೂ ಈ ಶಕ್ತಿಗಳ ಉನ್ನತ ಬೆಳವಣಿಗೆ ವಿರಳವಾಗಿದೆ. ದೋಷಗಳು, ಚಪಲಚಿತ್ತತೆ ಮತ್ತು ಪೂರ್ವಗ್ರಹ ಪೀಡಿತ ಕಲ್ಪನಾ ಶಕ್ತಿಯ ಮಿಶ್ರಣವು ಮಾನವಕುಲದ ನಿರ್ಣಾಯಕ ತಾರ್ಕಿಕತೆಯ ಪರಿಪೂರ್ಣ ಕಾರ್ಯಗಳನ್ನು ಅಡ್ಡಿಪಡಿಸಿ ವಿರೂಪಗೊಳಿಸುವುದರಿಂದಾಗಿ ಈಗಲೂ ಆ ಶಕ್ತಿಗಳನ್ನು ಅದು ಬಹಳಷ್ಟು ಅಪನಂಬಿಕೆಯಿಂದಲೇ ನೋಡುತ್ತದೆ. ಆದಾಗ್ಯೂ, ಈ ಸಾಮರ್ಥ್ಯಗಳಿಗೆ ಅದು ಸಹಾಯಕವಾಗಿಲ್ಲದಿದ್ದರೆ ಮಾeconನವಕುಲವು ಈಗಿರುವ ಹಂತಕ್ಕೆ ಮುಂದುವರೆಯುತ್ತಿರಲಿಲ್ಲ ಎಂಬುದು ಸ್ಪಷ್ಟವಿದೆ ಮತ್ತು ವಿದ್ಯಾರ್ಥಿಯಲ್ಲಿರುವ ಉನ್ನತ

ಹಾಗೂ ದಿಗ್ಭ್ರಮೆಗೊಳಿಸುವ ಈ ಪ್ರತಿಭೆಯನ್ನು ಹೇಗೆ ಹೊರತರಬೇಕು ಎನ್ನುವ ಪ್ರಶ್ನೆಗೆ ಉತ್ತರವನ್ನು ಶಿಕ್ಷಕರು ಇವರೆಗೂ ಕಂಡುಕೊಂಡಿಲ್ಲ. ಒಬ್ಬ ಸಾಧಾರಣ ಶಿಕ್ಷಕನು ಸಾಧ್ಯವಾದ್ದಷ್ಟೂ ಈ ಪ್ರತಿಭೆಯನ್ನು ಪ್ರೋತ್ಸಾಹಿಸುವುದಿಲ್ಲ, ಅಷ್ಟು ಮಾತ್ರವಲ್ಲ ಹತ್ತಿಕ್ಕುತ್ತಾನೆ; ಅದುವೇ ಹೆಚ್ಚು ಉದಾರಿಯಾದ ಶಿಕ್ಷಕನು ಅದನ್ನು ಸ್ವಾಗತಿಸುತ್ತಾನೆ. ಮಾನವಕುಲಕ್ಕೆ ಇಷ್ಟೊಂದು ಮುಖ್ಯವಾಗಿರುವ ಸಾಮರ್ಥ್ಯಗಳನ್ನು ನಮ್ಮ ಗಣನೆಗೆ ತೆಗೆದುಕೊಳ್ಳದೆ ಇರಲಾಗದು. ಅವುಗಳನ್ನು ಅಲಕ್ಷಿಸುವುದು ಮೂರ್ಖತನ, ಅವುಗಳನ್ನು ಪ್ರೋತ್ಸಾಹಿಸದೇ ಇರುವುದು ಅಪರಾಧ. ಅವುಗಳ ಅಪರಿಪೂರ್ಣ ಬೆಳವಣಿಗೆಯನ್ನು ಪರಿಪೂರ್ಣಗೊಳಿಸಬೇಕು, ದೋಷ, ಚಪಲಚಿತ್ತತೆ ಮತ್ತು ಪೂರ್ವಗ್ರಹ ಪೀಡಿತ ಕಲ್ಪನಾ ಶಕ್ತಿಯ ಈ ಮಿಶ್ರಣವನ್ನು ಎಚ್ಚರಿಕೆಯಿಂದ ಮತ್ತು ವಿವೇಕಯುತವಾಗಿ ತೆಗೆದುಹಾಕಬೇಕು. ಆದರೆ, ಇದನ್ನು ಶಿಕ್ಷಕನು ಮಾಡಲಾರನು; ಒಂದು ವೇಳೆ ಆತನು ಇದಕ್ಕೆ ಕೈಹಾಕಿದರೆ ಜೊಳ್ಳುಕಾಳುಗಳ ಜೊತೆ ಗಟ್ಟಿಕಾಳುಗಳನ್ನೂ ತೆಗೆದುಹಾಕಿಬಿಡುತ್ತಾನೆ. ಎಲ್ಲ ಶೈಕ್ಷಣಿಕ ಕಾರ್ಯಗಳಲ್ಲಿ ಮಾಡುವಂತೆ, ಇಲ್ಲಿಯೂ ಆತ ಬೆಳೆಯುತ್ತಿರುವ ಮನಸ್ಸನ್ನು ಅದರದ್ದೇ ಆದ ಪರಿಪೂರ್ಣತೆಯ ದಾರಿಯಲ್ಲಿರಿಸಬಲ್ಲ, ಅಷ್ಟೇ.

III

# ನೈತಿಕ ಸ್ವಭಾವ

ನಿಸರ್ಗದ ವಿಶೇಷ ಕೃಪೆ(economy)ಯಿಂದ ಪಡೆದಿರುವ ಮಾನಸಿಕ ಸ್ವಭಾವವು ನೈತಿಕತೆಯನ್ನು ಆಧರಿಸಿದೆ. ನೈತಿಕ ಹಾಗೂ ಸಂವೇಗಾತ್ಮಕ ಸ್ವರೂಪಗಳನ್ನು ಪರಿಪೂರ್ಣಗೊಳಿಸುವ ಹೊಣೆಗಾರಿಕೆಯಿಂದ ನುಣುಚಿಕೊಳ್ಳುವ ಬೌದ್ಧಿಕತೆಯ ಶಿಕ್ಷಣವು ಮನುಷ್ಯನ ಪ್ರಗತಿಗೆ ಹಾನಿಕಾರಕವಾಗಿದೆ. ಆದಾಗ್ಯೂ, ಮನಸ್ಸಿನ ತರಬೇತಿಗೆ ಸಾಕಷ್ಟು ಸೂಕ್ತವಾಗಬಲ್ಲ ಒಂದು ರೀತಿಯ ಪಠ್ಯಕ್ರಮ ಅಥವಾ ಪಠ್ಯವಸ್ತುವನ್ನು ವ್ಯವಸ್ಥೆಗೊಳಿಸುವುದು ಸುಲಭವಿರುವಾಗಲೂ, ಆಧುನಿಕ ಪರಿಸ್ಥಿತಿಗಳಲ್ಲಿ ಶಾಲೆ ಮತ್ತು ಕಾಲೇಜುಗಳಲ್ಲಿ ಸೂಕ್ತವಾದ ನೈತಿಕತೆಯ ತರಬೇತಿ ಕೊಡುವುದು ಈಗಲೂ ಸಾಧ್ಯವಾಗಿಲ್ಲ. ನೈತಿಕ ಮತ್ತು ಧಾರ್ಮಿಕ ಪಠ್ಯ-ಪುಸ್ತಕಗಳನ್ನು ಕಲಿಸುವುದರಿಂದ ವಿದ್ಯಾರ್ಥಿಗಳನ್ನು ನೈತಿಕ ಹಾಗೂ ಧಾರ್ಮಿಕ ಗುಣವುಳ್ಳವರನ್ನಾಗಿ ಮಾಡುವ ಪ್ರಯತ್ನವು ಖಂಡಿತವಾಗಿಯೂ ಕೇವಲ ಪ್ರತಿಷ್ಠೆಯ ಮತ್ತು ಹುಚ್ಚುತನದ ಕೆಲಸವಾಗುತ್ತದೆ. ಏಕೆಂದರೆ ಹೃದಯವು ಮನಸ್ಸು ಅಲ್ಲ, ಮತ್ತು ಮನಸ್ಸಿನ ಶಿಕ್ಷಣವು ಅಗತ್ಯವಾಗಿ ಹೃದಯವನ್ನು ಉತ್ತಮಗೊಳಿಸುವುದಿಲ್ಲ. ಹೀಗೆ ಮಾಡುವುದರಿಂದ ಯಾವ ಪರಿಣಾಮ ಇಲ್ಲವೇ ಇಲ್ಲ ಎಂದು ಹೇಳುವುದೂ ತಪ್ಪಾಗುತ್ತದೆ. 'ಅಂತಃಕರಣ'ದಲ್ಲಿ ಇದು ಕೆಲವೊಂದಿಷ್ಟು ವಿಚಾರಗಳ ಬೀಜಗಳನ್ನು ಬಿತ್ತುತ್ತದೆ. ಈ ವಿಚಾರಗಳಿಗೆ ಗಮನ ನೀಡುವುದನ್ನು ಅಭ್ಯಾಸ ಮಾಡಿಕೊಂಡರೆ ಅವು ವರ್ತನೆಯ ಮೇಲೆ ಪ್ರಭಾವ ಬೀರುತ್ತವೆ. ಆದರೆ, ನೈತಿಕ ಪಠ್ಯಪುಸ್ತಕಗಳ ಅಪಾಯವೇನೆಂದರೆ, ಅವು ಉನ್ನತ ಸಂಗತಿಗಳ ಬಗ್ಗೆ ಆಲೋಚಿಸುವುದನ್ನು ಯಾಂತ್ರಿಕ ಹಾಗೂ ಕೃತಕಗೊಳಿಸುತ್ತದೆ. ಮತ್ತು, ಯಾವುದು ಯಾಂತ್ರಿಕವೂ ಕೃತಕವೂ ಆಗಿರುವುದೋ ಅವು ಖಂಡಿತವಾಗಿಯೂ ಕಾರ್ಯನಿರ್ವಹಿಸಲು ನಿಷ್ಪ್ರಯೋಜಕ.

ಮನುಷ್ಯನ ನೈತಿಕ ಸ್ವಭಾವದೊಂದಿಗೆ ವ್ಯವಹರಿಸುವಾಗ ಅತ್ಯಂತ ಮಹತ್ವದ ಮೂರು ಸಂಗತಿಗಳು ಇವೆ -ಸಂವೇಗಗಳು, 'ಸಂಸ್ಕಾರಗಳು' ಅಥವಾ ಹರಳುಗಟ್ಟಿಗೊಂಡ ಅಭ್ಯಾಸಗಳು ಮತ್ತು ಸಂಘಸಹವಾಸಗಳು ಹಾಗೂ 'ಸ್ವಭಾವ' ಅಥವಾ ಸಹಜಗುಣ. ತನ್ನನ್ನು ನೈತಿಕವಾಗಿ ತರಬೇತುಗೊಳಿಸಿಕೊಳ್ಳಲು ಮನುಷ್ಯನಿಗಿರುವ ಏಕೈಕ ಮಾರ್ಗವೆಂದರೆ, ಸರಿಯಾದ ಸಂವೇಗ, ಉತ್ತಮ ಸಂಘಸಹವಾಸ, ಅತ್ಯುತ್ತಮ ಮಾನಸಿಕ, ಸಂವೇಗಾತ್ಮಕ ಮತ್ತು ದೈಹಿಕ ಅಭ್ಯಾಸ ಹಾಗೂ ತನ್ನ ಮೂಲ ಸ್ವಭಾವದ ಮೂಲಭೂತ ಅಂತಃಪ್ರೇರಣೆಗಳ ಯೋಗ್ಯ ಕ್ರಿಯೆಗಳನ್ನು ಅನುಸರಿಸುವುದು – ಇವುಗಳನ್ನೆಲ್ಲವನ್ನು ರೂಢಿಸಿಕೊಳ್ಳಬೇಕಾಗುತ್ತದೆ. ನೀವು ಮಕ್ಕಳ ಮೇಲೆ ಕೆಲವು ಶಿಸ್ತುನಿಯಮಗಳನ್ನು ಹೇರಬಹುದು, ಅವರಿಗೆ ಒಂದು ನಿರ್ದಿಷ್ಟ ರೂಪವನ್ನು ಕೊಡಬಹುದು, ಬಯಸಿದ ದಾರಿಯಲ್ಲಿಯೇ ಹೋಗುವಂತೆ ಅವರನ್ನು ಕಟ್ಟಿಹಾಕಬಹುದು, ಆದರೆ ಅವರ ಹೃದಯ ಮತ್ತು ಸ್ವಭಾವಗಳನ್ನು ಗೆಲ್ಲದೇ, ನಿಮ್ಮತ್ತ ಎಳೆದುಕೊಳ್ಳದೇ ಹೇರಿದ ಶಿಸ್ತುನಿಯಮಗಳಿಗೆ ಬದ್ಧವಾಗಿರುವುದು ಆಷಾಡಭೂತಿತನದ ಮತ್ತು ಹೃದಯಹೀನ, ರೂಢಿಗತ, ಕೆಲವು ಸಲ ಅಂಜುಬುರುಕ ಅನುಸರಣೆಯಾಗುತ್ತದೆ. ಯುರೋಪಿನಲ್ಲಿ ಆಗಿರುವುದು ಇದುವೇ. ಶಾಲೆಯಲ್ಲಿ ಮತ್ತು ಮನೆಯಲ್ಲಿ ಶಿಸ್ತಿನ ನೊಗವು ಇಲ್ಲವಾದಾಗ ಎದ್ದು ಕಾಣುವ ಆ ವಿದ್ಯಮಾನವಾದ -ಲಂಗುಲಗಾಮಿಲ್ಲದ ಲಂಪಟತನದ ವರ್ತನೆಗೆ ಹಾಗೂ ಯುರೋಪಿನ ಜನಜೀವನದ ಒಂದು ಬಹುದೊಡ್ಡ ವೈಶಿಷ್ಟ್ಯವೆನ್ನಬಹುದಾದ ಸಾಮಾಜಿಕ

ಆಷಾಢಭೂತಿತನಕ್ಕೆ ದಾರಿ ಮಾಡಿಕೊಡುತ್ತದೆ. ಮನುಷ್ಯನು ಯಾವುದನ್ನು ಮೆಚ್ಚಿಕೊಳ್ಳುತ್ತಾನೆಯೋ ಮತ್ತು ಒಪ್ಪಿಕೊಳ್ಳುತ್ತಾನೆಯೋ ಅದು ಮಾತ್ರ ಅವನ ವ್ಯಕ್ತಿತ್ವದ ಭಾಗವಾಗುತ್ತದೆ; ಉಳಿದುದೆಲ್ಲವೂ ಮುಖವಾಡ ಅಷ್ಟೇ. ಈತನು ಮನೆಯಲ್ಲಿ ಮತ್ತು ಶಾಲೆಯಲ್ಲಿ ಹೇರಿದ ಯಾಂತ್ರಿಕ ನೈತಿಕತೆಯನ್ನು ಅನುಸರಿಸುವಂತೆ, ಸಮಾಜವು ಹೇರಿದ ಶಿಸ್ತುಗಳನ್ನೂ ಒಪ್ಪಿಕೊಂಡು ನಡೆಯುತ್ತಾನೆ. ಆದರೆ ತನ್ನ ನಿಜ ಜೀವನವನ್ನು, ಆಂತರಿಕ ಮತ್ತು ವೈಯಕ್ತಿಕ ಜೀವನವನ್ನು ತನ್ನ ಸ್ವ-ಇಚ್ಛೆಯಂತೆ, ಭಾವೋದ್ವೇಗಗಳಿಗೆ ಅನುಗುಣವಾಗಿ ಸಾಗಿಸಲು ತಾನು ಸ್ವತಂತ್ರನಿದ್ದೇನೆ ಎಂದು ಭಾವಿಸುತ್ತಾನೆ. ಮತ್ತೊಂದೆಡೆ, ನೈತಿಕ ಮತ್ತು ಧಾರ್ಮಿಕ ಶಿಕ್ಷಣವನ್ನು ಅಲಕ್ಷಿಸುವುದು ಒಟ್ಟಾರೆ ಇಡೀ ಜನಾಂಗವನ್ನೇ ಹಾಳುಗೆಡವಿದಂತೆ. ಸ್ವದೇಶಿ ಚಳುವಳಿಯ ಸಕಾರಾತ್ಮಕ ಶಕ್ತಿಯು ಪ್ರಭಾವ ಬೀರುವ ಮುಂಚಿನ ನಮ್ಮ ಯುವಜನರ ಕುಖ್ಯಾತ ನೈತಿಕ ಭ್ರಷ್ಟತೆಯು ಇಂಗ್ಲಿಷ್ ಶಿಕ್ಷಣ ವ್ಯವಸ್ಥೆಯ ಮೂಲಕ ಅವರಿಗೆ ದಯಪಾಲಿಸಲಾದ ಮಾನಸಿಕ ಶಿಕ್ಷಣದ ನೇರ ಫಲವಾಗಿತ್ತು. ಸೆಂಟ್ರಲ್ ಹಿಂದೂ ಕಾಲೇಜಿನಲ್ಲಿ ಮಾಡುತ್ತಿರುವಂತೆ ಭಾರತೀಯ ವೇಷದಲ್ಲಿ ಇಂಗ್ಲಿಷ್ ವ್ಯವಸ್ಥೆಯನ್ನು ಅನುಸರಿಸುವುದು ಯುರೋಪಿನಲ್ಲಿ ಬೀರಿದ ಪರಿಣಾಮವನ್ನೇ ಬೀರುವ ಸಾಧ್ಯತೆಯೆಡೆಗೆ ಕೊಂಡೊಯುತ್ತದೆ. ಇದು ಕುರುಡುಗಣ್ಣಿನಲ್ಲಿ ಮೆಳ್ಳಗಣ್ಣು ಮೇಲು ಎಂಬಂತಾಗಿರುತ್ತದೆ – ಇಷ್ಟು ಮಾತ್ರ ಅದರ ಬಗ್ಗೆ ಹೇಳಬಹುದು.

ಮನಸ್ಸಿನ ಶಿಕ್ಷಣದಲ್ಲಿ ಇರುವಂತೆ, ಹೃದಯದ ಶಿಕ್ಷಣದ ಅತ್ಯುತ್ತಮ ದಾರಿ ಎಂದರೆ ಮಗು ತನ್ನದೇ ಆದ ಪರಿಪೂರ್ಣತೆಯನ್ನು ಕಂಡುಕೊಳ್ಳಲು ಸರಿದಾರಿಯಲ್ಲಿ ನಡೆಯುವಂತೆ ಮಾರ್ಗದರ್ಶನ ನೀಡಿ, ಮೂಗು ತೂರಿಸುವುದರ ಹೊರತಾಗಿ ಅವನನ್ನು ಗಮನಿಸುತ್ತ, ಸಲಹೆ ನೀಡುತ್ತ, ಸಹಾಯ ಮಾಡುತ್ತ, ಆ ದಾರಿಯನ್ನು ಅನುಸರಿಸಲು ಪ್ರೋತ್ಸಾಹಿಸಬೇಕು. ಇಂಗ್ಲಿಷ್ ಬೋರ್ಡಿಂಗ್ ಶಾಲೆಯ ಒಂದು ಅತ್ಯುತ್ತಮ ಅಂಶವೆಂದರೆ, ಅಲ್ಲಿ ಶಿಕ್ಷಕ ತನ್ನ ಅತ್ಯುನ್ನತ ಸಕಾರಾತ್ಮಕ ಶಕ್ತಿಯ ಅನುಸಾರ ಒಬ್ಬ ನೈತಿಕ ಮಾರ್ಗದರ್ಶಿ ಮತ್ತು ಉದಾಹರಣೆಯಾಗಿ ನಿಂತು, ಪರಸ್ಪರ ಸಹಾಯ ಮಾಡಿಕೊಂಡು ಪ್ರಭಾವಿಸಲು ಅವರಿಗೆ ಸದ್ದಿಲ್ಲದೆ ಧ್ವನಿತವಾಗಿ ತೋರಿಸಿದ ಪಥದಲ್ಲಿ ನಡೆಯಲು ಅವನು ವಿದ್ಯಾರ್ಥಿಗಳನ್ನು ಅವರ ಪಾಡಿಗೆ ಬಿಟ್ಟುಬಿಡುತ್ತಾನೆ. ಆದರೆ ಅಲ್ಲಿ ಅನುಸರಿಸಲಾಗುವ ವಿಧಾನವು ಒರಟಾಗಿದ್ದು ಮತ್ತು ಹೊರಗಿನಿಂದ ಹೇರಲಾದ ವಿಪರೀತ ಶಿಸ್ತಿನಿಂದ ವಿಕಾರಗೊಳಿಸುವಂತದ್ದಾಗಿದ್ದು ವಿದ್ಯಾರ್ಥಿಗಳಲ್ಲಿ ಆ ಬಗ್ಗೆ ಭಯಭೀತಿ ಮತ್ತು ಅತ್ಯಲ್ಪ ಮನದಾಳದ ಸಹಕಾರದ ಹೊರತು ಗೌರವವಿರುವುದಿಲ್ಲ. ಒಳ್ಳೆಯದಕ್ಕಿಂತ ಕೆಡುಕೇ ಹೆಚ್ಚು. ಅದುವೇ, ತನ್ನ ಜ್ಞಾನ ಮತ್ತು ಗೌರವಾರ್ಹತೆಯ ಮೂಲಕ ಪ್ರಶ್ನಿಸದ ವಿಧೇಯತೆ, ನಿಷ್ಕಳಂಕ ಭಕ್ತಿ, ಗೌರವಪೂರ್ಣ ಅನುಕರಣೆಯನ್ನು ಪಡೆಯುವ ಭಾರತದ ಪ್ರಾಚೀನ 'ಗುರು' ವ್ಯವಸ್ಥೆಯು ನೈತಿಕ ಶಿಸ್ತಿನ ಹೆಚ್ಚು ಅತ್ಯುತ್ತಮ ವಿಧಾನವಾಗಿತ್ತು. ಆ ಪ್ರಾಚೀನ ವ್ಯವಸ್ಥೆಯನ್ನು ಈಗ ಪುನಃ ಅನುಷ್ಠಾನಗೊಳಿಸುವುದು ಅಸಾಧ್ಯ; ಆದರೆ, ಸಾಮಾನ್ಯವಾಗಿ ಒಬ್ಬ ಶಿಕ್ಷಕನನ್ನು ಕೇವಲ ನೇಮಕಗೊಂಡ ಬೋಧಕ ಅಥವಾ ದಯಾಮಯಿ ಪೋಲಿಸನನ್ನಾಗಿ ಮಾಡುವ ಯುರೋಪಿನ ವ್ಯವಸ್ಥೆಯ ಬದಲಿಗೆ ಶಿಕ್ಷಕನನ್ನು ಒಬ್ಬ ವಿವೇಕವುಳ್ಳ ಸ್ನೇಹಿತ, ಮಾರ್ಗದರ್ಶಿ ಮತ್ತು ಸಹಾಯಕನನ್ನಾಗಿ ಕಾಣುವ ವ್ಯವಸ್ಥೆಯನ್ನು ರಚಿಸುವುದು ಅಸಾಧ್ಯವೇನಲ್ಲ.

ನೈತಿಕ ತರಬೇತಿಯ ಮೊದಲ ನಿಯಮವೆಂದರೆ ಸಲಹೆ ನೀಡುವುದು ಮತ್ತು ವಿನಯದಿಂದ ಕರೆಯುವುದೇ ಹೊರತು ಆಜ್ಞಾಪಿಸುವುದು ಅಥವಾ ಹೇರುವುದು ಅಲ್ಲ. ಸಲಹೆ ನೀಡುವ ಅತ್ಯುತ್ತಮ ವಿಧಾನವೆಂದರೆ ವೈಯಕ್ತಿಕ ನಡತೆಯ ಮೂಲಕ ಉದಾಹರಣೆಯಾಗಿರುವುದು, ನಿತ್ಯವೂ ಸಂವಾದ ನಡೆಸುವುದು, ಪ್ರತಿದಿನ ಪುಸ್ತಕಗಳನ್ನು ಓದುವುದು. ಈ ಪುಸ್ತಕಗಳು ಕಿರಿಯ ವಿದ್ಯಾರ್ಥಿಗೆ ಗತಕಾಲದ ಉದಾತ್ತ ಉದಾಹರಣೆಗಳನ್ನು ಒಳಗೊಂಡಿರಬೇಕು. ಅವು ಕೇವಲ ನೀತಿ ಪಾಠಗಳಂತಿರದೇ ಮನುಷ್ಯನ ಪರಮಪ್ರಧಾನ ಆಸಕ್ತಿಗಳನ್ನು ಕಾಣಿಸುವಂಥವಾಗಿರಬೇಕು. ಹಿರಿಯ ವಿದ್ಯಾರ್ಥಿಗೆ ಮಹಾತ್ಮರ ಮಹಾನ್

ವಿಚಾರಗಳು, ಉನ್ನತ ಸಂವೇಗಗಳನ್ನು ಉದ್ದೀಪನಗೊಳಿಸುವ ಹಾಗೂ ಉನ್ನತ ಆದರ್ಶಗಳು ಮತ್ತು ಆಕಾಂಕ್ಷೆಗಳನ್ನು ಪ್ರೇರೇಪಿಸುವಂತಹ ಸಾಹಿತ್ಯಕ ಭಾಗಗಳು, ಚರಿತ್ರೆ ಮತ್ತು ಜೀವನಚರಿತ್ರೆಯಲ್ಲಿ ಜೀವಂತ ದೃಷ್ಟಾಂತಗಳಾಗಿರುವ ಆ ಮಹಾನ್ ವಿಚಾರಗಳು, ಆದರ್ಶಗಳುಳ್ಳ ಸಂವೇಗಗಳು, ಆದರ್ಶಮಯ ಆಕಾಂಕ್ಷೆಗಳ ದಾಖಲೆಗಳನ್ನು ನೀಡಬೇಕು. ಇದು ಒಂದು ರೀತಿಯದ `ಉತ್ತಮರ ಸಂಗ', `ಸತ್ಸಂಗ'ವಾಗಿದ್ದು, ಕೃತಕೋಪಚಾರದ ಉಪದೇಶ ನೀಡುವುದನ್ನು ತಪ್ಪಿಸುವವರೆಗೂ ಇದು ಪರಿಣಾಮ ಬೀರುವುದರಲ್ಲಿ ವಿಫಲವಾಗುವ ಸಂಭವ ಕಡಮೆ, ಮತ್ತು ಶಿಕ್ಷಕ ಆ ಮಹೋನ್ನತ ವಿಚಾರಗಳನ್ನು ತನ್ನ ವೈಯಕ್ತಿಕ ಜೀವನದಲ್ಲಿಯೇ ಅಳವಡಿಸಿ, ತನ್ನ ವಿದ್ಯಾರ್ಥಿಗಳಿಗೆ ಕಾಣಿಸುವಂತಾಗುವುದಾದರೆ, ಅದರ ಪರಿಣಾಮ ಅದ್ಭುತವಾಗಿರುತ್ತದೆ. ಆದಾಗ್ಯೂ, ಯುವ ಜೀವನಕ್ಕೆ ತನ್ನ ಸೀಮಿತ ವಲಯದಲ್ಲಿಯೇ ತನ್ನೊಳಗೆ ಹೊಮ್ಮುವ ನೈತಿಕ ಅಂತಃಪ್ರೇರಣೆಗಳನ್ನು ಕ್ರಿಯೆಯಲ್ಲಿ ಸಾಕಾರಗೊಳಿಸಲು ಅವಕಾಶ ಕೊಡದಿದ್ದಲ್ಲಿ ಇದು ಪೂರ್ಣ ಪ್ರಭಾವ ಬೀರಲು ಸಾಧ್ಯವಾಗದು. ಬ್ರಾಹ್ಮಣನ ಜ್ಞಾನದ ಹಸಿವು, ಭಕ್ತಿ, ಶುದ್ಧತೆ, ವೈರಾಗ್ಯ; ಕ್ಷತ್ರಿಯನ ಧೈರ್ಯ, ಉತ್ಸಾಹ, ಮದಿಪು, ಶ್ರೇಷ್ಠತೆ, ಧೀರತನ, ದೇಶಭಕ್ತಿ; ವೈಶ್ಯರ ಲಾಭ ಗಳಿಕೆಯ ಬುದ್ಧಿ, ಕೌಶಲ್ಯ, ಶ್ರಮಶೀಲತೆ, ಉದಾರ ಉದ್ಯಮಶೀಲತೆ, ಮತ್ತು ಧಾರಾಳತೆ; ಶೂದ್ರನ ನಿರಹಂಭಾವ, ಪ್ರೀತಿಯುಕ್ತ ಸೇವಾಭಾವ - ಇವು ಆರ್ಯನ ಗುಣಲಕ್ಷಣಗಳು. ಈ ಗುಣಗಳು ಇಡೀ ದೇಶದಲ್ಲಿ, ನಮ್ಮ ಯುವಜನದಲ್ಲಿ ನಾವು ಬಯಸುವ ನೈತಿಕ ಮನೋಧರ್ಮ. ಆದರೆ, ಈ ಕಿರಿಯರಿಗೆ ಆರ್ಯ ಪರಂಪರೆಯಲ್ಲಿ ತರಬೇತಿ ಹೊಂದಲು, ವಯಸ್ಕ ಜೀವನದಲ್ಲಿ ಮೈಗೂಡಿಸಿಕೊಳ್ಳಬೇಕಾದ ಗುಣಗಳನ್ನು ಬಾಲ್ಯ ಮತ್ತು ಕಿಶೋರ ಅವಸ್ಥೆಯಲ್ಲಿ ಅವುಗಳನ್ನು ಅಭ್ಯಾಸ ಮತ್ತು ಸುಪರಿಚಿತ ಮಾಡಿಕೊಳ್ಳುವುದರ ಮೂಲಕ ರೂಪಿಸಿಕೊಳ್ಳಲು ಅವಕಾಶವನ್ನೇ ಕೊಡದಿದ್ದರೆ, ಅದನ್ನು ಅವರು ರೂಪಿಸಿಕೊಳ್ಳುವುದಾದರೂ ಹೇಗೆ ಸಾಧ್ಯ?

ಆದುದರಿಂದ, ತಮ್ಮ ಸ್ವಭಾವದಲ್ಲಿನ ಅತ್ಯುತ್ತಮವಾದುದೆಲ್ಲವನ್ನೂ ಬೆಳೆಸಿಕೊಳ್ಳಲು ವಾಸ್ತವಿಕ ಅವಕಾಶವನ್ನು ಹಾಗೂ ಬೌದ್ಧಿಕ ಪ್ರೋತ್ಸಾಹವನ್ನು ಎಲ್ಲ ಮಕ್ಕಳಿಗೂ ಕೊಡಬೇಕು. ಆದರೆ, ಯಾವುದೋ ಒಂದು ಮಗುವಿನ ಮನಸ್ಸು ಮತ್ತು ದೇಹದಲ್ಲಿ ಕೆಟ್ಟ ಗುಣಗಳು, ಕೆಟ್ಟ ಅಭ್ಯಾಸಗಳು, ಕೆಟ್ಟ 'ಸಂಸ್ಕಾರಗಳು' ಕಂಡುಬಂದರೆ, ಅಂಥವನನ್ನು ತಪ್ಪಿದವನಂತೆ ಕಠೋರವಾಗಿ ಕಾಣದೇ, ತ್ಯಜಿಸುವ ಮತ್ತು ಬದಲಿಸುವ, ರಾಜಯೋಗ ವಿಧಾನವಾದ 'ಸಂಯಮ'ವನ್ನು ಅಳವಡಿಸಿಕೊಳ್ಳುವ ಮೂಲಕ ಆ ಅವಗುಣಗಳಿಂದ ಬಿಡುಗಡೆ ಪಡೆಯಲು ಪ್ರೋತ್ಸಾಹ ನೀಡಬೇಕು. ಆ ಅವಗುಣಗಳನ್ನು ಪಾಪಗಳು ಅಥವಾ ಅಪರಾಧಗಳು ಎಂದು ನೋಡದೇ, ಆತ್ಮಶಕ್ತಿಯ ದೃಢ ಮತ್ತು ನಿರಂತರ ಪ್ರಯತ್ನದಿಂದ – ಅಂದರೆ ಯಾವಾಗ ಮನಸ್ಸಿನಲ್ಲಿ ಅಸತ್ಯವು ಹೊಮ್ಮುತ್ತದೆಯೋ ಅದನ್ನು ತ್ಯಜಿಸಿ ಸತ್ಯದಿಂದಲೂ, ಭಯವನ್ನು ಧೈರ್ಯದಿಂದಲೂ, ಸ್ವಾರ್ಥವನ್ನು ತ್ಯಾಗ ಮತ್ತು ವೈರಾಗ್ಯಗಳಿಂದಲೂ, ದ್ವೇಷವನ್ನು ಪ್ರೀತಿಯಿಂದಲೂ - ಎದುರಿಸುವ ಮೂಲಕ ವಾಸಿಯಾಗಬಲ್ಲ ಮತ್ತು ಪರಿವರ್ತಿಸಬಲ್ಲ ಅನಾರೋಗ್ಯದ ಲಕ್ಷಣವೆಂದು ಭಾವಿಸಲು ಪ್ರೋತ್ಸಾಹಿಸಬೇಕು. ಇನ್ನೂ ರೂಪುಗೊಂಡಿರದ ಸದ್ಗುಣಗಳನ್ನು ದೋಷಗಳೆಂದು ತಿಳಿದು ಅದನ್ನು ಅಲ್ಲಗಳೆಯದಂತೆ ಅಗಾಧ ಎಚ್ಚರವಹಿಸಬೇಕಾಗುತ್ತದೆ. ಅನೇಕ ಕಿರಿಯರ ಒರಟುತನ ಮತ್ತು ಬೇಜವಾಬ್ದಾರಿತನಗಳು ಅವರಲ್ಲಿ ಉಕ್ಕಿಹರಿಯುವ ವಿಪರೀತ ಶಕ್ತಿ, ಶ್ರೇಷ್ಠತೆ ಮತ್ತು ಉದಾತ್ತತೆಗಳಾಗಿರುತ್ತವೆ. ಅವುಗಳನ್ನು ಪೋಷಿಸಬೇಕೇ ವಿನಃ ಧೈರ್ಯಗೆಡಿಸಬಾರದು.

ನಾನು ನೈತಿಕತೆಯ ಬಗ್ಗೆ ಮಾತನಾಡಿದ್ದೇನೆ; ಧಾರ್ಮಿಕ ಬೋಧನೆ ಕುರಿತೂ ಒಂದು ಮಾತು ಹೇಳುವ ಅಗತ್ಯವಿದೆ. ಕೇವಲ ಧಾರ್ಮಿಕ ಸಿದ್ಧಾಂತಗಳನ್ನು ಬೋಧಿಸುವುದರಿಂದ ಮಕ್ಕಳನ್ನು ಧರ್ಮಶ್ರದ್ಧೆಯುಳ್ಳವರನ್ನಾಗಿಯೂ, ನೀತಿವಂತರನ್ನಾಗಿಯೂ ಮಾಡಬಹುದು ಎಂಬ ವಿಚಿತ್ರ ಕಲ್ಪನೆಯು ಬಲವಾಗಿದೆ. ಇದೊಂದು ಯುರೋಪಿನ ದೋಷ. ಇದರ

ಅನುಸರಣಾಭ್ಯಾಸವು ಒಂದೋ ಅಂತರಂಗದ ಮೇಲೆ ಯಾವ ಪರಿಣಾಮವನ್ನೂ ಬೀರದ ಮತ್ತು ಬಾಹ್ಯ ಜೀವನದ ಮೇಲೆ ಅತ್ಯಲ್ಪ ಪರಿಣಾಮ ಬೀರುವ ತತ್ತ್ವಗಳನ್ನು ಯಾಂತ್ರಿಕವಾಗಿ ಒಪ್ಪಿಕೊಂಡಂತಾಗುತ್ತದೆ. ಇಲ್ಲವೇ, ಅದು ಒಬ್ಬ ಅಂಧಾಭಿಮಾನಿಯನ್ನು, ಭಕ್ತಿಯ ಅತಿರೇಕವಾದಿಯನ್ನು, ಆಚಾರವಾದಿಯನ್ನು ಅಥವಾ ಬೂಟಾಟಿಕೆಯ ದಾಸ್ಯ ಸ್ವಭಾವ ಹೊಂದಿರುವವನನ್ನು ಹುಟ್ಟುಹಾಕುತ್ತದೆ. ಧರ್ಮವನ್ನು ಪಾಲಿಸಬೇಕೇ ವಿನಃ ಅದನ್ನೊಂದು ನಂಬಿಕೆಯಾಗಿ ಕಲಿಯಬಾರದು. ಬಂಗಾಲದ ರಾಷ್ಟ್ರೀಯ ಶಿಕ್ಷಣ ಎಂದು ಕರೆಯಲಾಗುತ್ತಿರುವ ಶಿಕ್ಷಣದಲ್ಲಿ ಆಗಿರುವ ಒಂದು ರಾಜೀ ಒಪ್ಪಂದ ಏನೆಂದರೆ, ಧಾರ್ಮಿಕ ನಂಬಿಕೆಗಳ ಬೋಧನೆಯನ್ನು ಕಡ್ಡಾಯಗೊಳಿಸಿರುವುದು ಹಾಗೂ ಅದೇ ವೇಳೆ 'ಅನುಷ್ಠಾನ' ಅಥವಾ ಧಾರ್ಮಿಕ ಆಚರಣೆ - ಅವುಗಳ ಅಭ್ಯಾಸವನ್ನು ನಿಷೇಧಿಸಿರುವುದು. ಮನುಷ್ಯನ ಮನಸ್ಸನ್ನು ಈ ವಿಷಯದಲ್ಲಿ ಪಲ್ಲಟಗೊಳಿಸುವಂಥ ಅಜ್ಞಾನಜನ್ಯ ಗೊಂದಲಕ್ಕೆ ಇದು ಒಂದು ಉದಾಹರಣೆ. ಈ ನಿಷೇಧವು ಘೋಷಿತ ಅಥವಾ ಅಘೋಷಿತ ಮತಾತೀತಕ್ಕೆ ನೀಡಿದ ಆಮಿಷವಾಗಿದೆ. ಜೀವನದಲ್ಲಿ ಧಾರ್ಮಿಕ ಬೋಧನೆಗಳನ್ನು ಅಳವಡಿಸಿಕೊಳ್ಳದಿದ್ದರೆ ಅದಕ್ಕೆ ಯಾವುದೇ ಬೆಲೆ ಇರುವುದಿಲ್ಲ. ವಿವಿಧ ಬಗೆಯ ಆಧ್ಯಾತ್ಮಿಕ 'ಸಾಧನೆ', ಆಧ್ಯಾತ್ಮಿಕ ಸ್ವಯಂ-ತರಬೇತಿ ಮತ್ತು ಆಚರಣೆಗಳನ್ನು ಪಾಲಿಸುವುದೇ ಧಾರ್ಮಿಕ ಜೀವನಕ್ಕಿರುವ ಪರಿಣಾಮಕಾರಿ ಸಿದ್ಧತೆ. ಪ್ರಾರ್ಥನೆ, ಗೌರವಾರ್ಪಣೆ, ಧರ್ಮಾಚರಣೆ ಮುಂತಾದ ಆಚರಣೆಗಳನ್ನು ಧಾರ್ಮಿಕ ಜೀವನಕ್ಕೆ ತಮ್ಮನ್ನು ತಾವು ಸಿದ್ಧಗೊಳಿಸಿಕೊಳ್ಳುವ ಅಪೇಕ್ಷೆಯಿಂದ ಅನೇಕರು ಆಚರಿಸುತ್ತಾರೆ; ಈ ಆಚರಣೆಯನ್ನೇ ಅಂತಿಮ ಗುರಿಯನ್ನಾಗಿಟ್ಟುಕೊಳ್ಳದಿದ್ದರೆ, ಇದೆಲ್ಲವೂ ಆಧ್ಯಾತ್ಮಿಕ ಪ್ರಗತಿಗೆ ತುಂಬ ಸಹಾಯಕಾರಿಯಾಗುತ್ತದೆ; ಇದಕ್ಕೆ ವಿರೋಧವಿದ್ದರೆ, ಅವುಗಳ ಸ್ಥಾನದಲ್ಲಿ ಕೆಲವು ಬೇರೆ ರೀತಿಯ ಧ್ಯಾನ, ಭಕ್ತಿ ಅಥವಾ ಧಾರ್ಮಿಕ ಕರ್ತವ್ಯಗಳನ್ನು ಅನುಸರಿಸಬೇಕು. ಇಲ್ಲದಿದ್ದರೆ, ಧಾರ್ಮಿಕ ಬೋಧನೆಯ ಪ್ರಯೋಜನ ಏನೂ ಇರುವುದಿಲ್ಲ, ಅದರ ಬದಲು ಆ ಶಿಕ್ಷಣವನ್ನು ಕೊಡದಿರುವುದೇ ಎಷ್ಟೋ ಉತ್ತಮ.

ಯಾವುದೇ ರೀತಿಯ ಧರ್ಮದ ವಿಶೇಷ ಶಿಕ್ಷಣ ಕೊಡಲಾಗುತ್ತದೆಯೋ ಇಲ್ಲವೋ, ಧರ್ಮದ ತಿರುಳಾಗಿರುವ, `ದೇವ'ರಿಗಾಗಿ, ಮಾನವ ಕುಲಕ್ಕಾಗಿ, ದೇಶಕ್ಕಾಗಿ, ಬೇರೆಯವರಿಗಾಗಿ ಮತ್ತು ತನಗಾಗಿ ಬದುಕುವುದು – ಇವುಗಳನ್ನು ರಾಷ್ಟ್ರೀಯ ಎಂದು ಕರೆದುಕೊಂಡಿರುವ ಎಲ್ಲ ಶಾಲೆಗಳಲ್ಲಿ ಒಂದು ಆದರ್ಶವನ್ನಾಗಿ ಕಲಿಸಬೇಕು. ನಮ್ಮ ಶಾಲೆಗಳಲ್ಲಿ ವ್ಯಾಪಿಸಸಿರುವ ಈ ಹಿಂದೂ ಧರ್ಮದ ಚೈತನ್ಯವು, ಭಾರತೀಯ ವಿಷಯಗಳನ್ನು, ಭಾರತೀಯ ವಿಧಾನಗಳ ಬಳಕೆಯನ್ನು ಅಥವಾ ಹಿಂದೂ ನಂಬಿಕೆ ಮತ್ತು ಹಿಂದೂ ಗ್ರಂಥಗಳನ್ನು ಔಪಚಾರಿಕವಾಗಿ ನಮ್ಮ ಶಾಲೆಗಳಲ್ಲಿ ಬೋಧಿಸುವುದಕ್ಕಿಂತ ಹೆಚ್ಚಾಗಿ, ರಾಷ್ಟ್ರೀಯತೆಯ ತಿರುಳಾಗಬೇಕು. ಇದು ನಮ್ಮ ಶಾಲೆಗಳನ್ನು ಉಳಿದವುಗಳಿಗಿಂತ ವಿಶಿಷ್ಟವನ್ನಾಗಿ ಮಾಡುತ್ತದೆ.

IV

# ಏಕಕಾಲಿಕ ಮತ್ತು ಕ್ರಮಾನುಗತ ಬೋಧನೆ

ಭಾರತದಲ್ಲಿ ಅನುಸರಿಸಲಾಗುತ್ತಿರುವ ಆಧುನಿಕ ತರಬೇತಿಯ ಗಮನಾರ್ಹ ಲಕ್ಷಣವೆಂದರೆ ಬೋಧನೆಯನ್ನು ತುಣುಕುಗಳಾಗಿ ನೀಡುವ ಅಭ್ಯಾಸವನ್ನು ಅರ್ಥಶೂನ್ಯತೆಯ ಮಟ್ಟಕ್ಕೆ ಇಳಿಸಿರುವುದಾಗಿದೆ (reduction ad absurdum). ಹಲವಾರು ವಿಷಯಗಳ ಜೊತೆಯಲ್ಲಿ ಒಂದು ವಿಷಯವನ್ನು ಒಂದು ಸಮಯಕ್ಕೆ ಸ್ವಲ್ಪ ಮಾತ್ರ ಕಲಿಸಿ, ಒಂದು ವರ್ಷದಲ್ಲಿ ತುಂಬ ಚೆನ್ನಾಗಿ ಕಲಿಯಬಹುದಾದುದನ್ನು ಏಳು ವರ್ಷಗಳಲ್ಲಿ ಕೆಟ್ಟದಾಗಿ ಕಲಿಯುವುದರಿಂದ ವಿದ್ಯಾರ್ಥಿಯು ಮಾನವ ಜ್ಞಾನದ ಯಾವುದೇ ಮಹಾನ್ ಕ್ಷೇತ್ರದಲ್ಲಿ ಪಾರಂಗತನಾಗದೆ ಅಪರಿಪೂರ್ಣ ಜ್ಞಾನ ಹೊಂದಿದ ಸುಸಜ್ಜಿತನಾಗಿರದ ವ್ಯಕ್ತಿಯಾಗಿ ಹೊರಬರುತ್ತಾನೆ. ರಾಷ್ಟ್ರೀಯ ಪರಿಷತ್ತು ಅಳವಡಿಸಿಕೊಂಡಿರುವ ಉಭಯಚರ ಸ್ವಭಾವದ ಹಾಗೂ ತಳಮಟ್ಟದ ಶಿಕ್ಷಣ ವ್ಯವಸ್ಥೆಯು ಈ ರೀತಿ ತುಣುಕುಗಳಲ್ಲಿ ಕಲಿಸುವುದನ್ನೇ ತಳಹಂತದಲ್ಲಿ ಮತ್ತು ಮಾಧ್ಯಮಿಕ ಹಂತದಲ್ಲಿ ಹೆಚ್ಚಿಸಲು ಯತ್ನಿಸುತ್ತದೆ, ಮತ್ತು ಇದ್ದಕ್ಕಿದ್ದಂತೆ ಉನ್ನತ ಹಂತದಲ್ಲಿ ಆಡಂಬರವಾದ ವಿಶೇಷತೆಗೆ ಬದಲಾಯಿಸುತ್ತದೆ. ಇದು ತ್ರಿಕೋನವನ್ನು ಅದರ ತುದಿಯ ಮೇಲೆ ನಿಲ್ಲಿಸಿ, ಅದು ನಿಲ್ಲುತ್ತದೆ ಎಂದು ನಂಬಿದಂತೆ.

ಹಳೆಯ ವ್ಯವಸ್ಥೆಯಲ್ಲಿ ಒಂದು ಅಥವಾ ಎರಡು ವಿಷಯಗಳನ್ನು ತುಂಬ ಚೆನ್ನಾಗಿ ಮತ್ತು ಸಂಪೂರ್ಣವಾಗಿ ಕಲಿಸಿ, ತದನಂತರ ಬೇರೆ ವಿಷಯಗಳತ್ತ ಸಾಗುವುದಾಗಿತ್ತು. ಇದು ಖಂಡಿತವಾಗಿಯೂ ಈ ಆಧುನಿಕ ವ್ಯವಸ್ಥೆಗಿಂತ ಹೆಚ್ಚು ವಿವೇಚನಾಯುಕ್ತವಾಗಿತ್ತು. ಅದು ಇಷ್ಟೊಂದು ವೈವಿಧ್ಯಮಯ ಮಾಹಿತಿಯನ್ನು ತಲುಪಿಸದಿದ್ದರೂ, ಆಳವಾದ, ಉನ್ನತವಾದ ಮತ್ತು ಹೆಚ್ಚು ನಿಜವಾದ ಸಂಸ್ಕೃತಿಯನ್ನು ನಿರ್ಮಿಸಿತ್ತು. ಸಾಧಾರಣ ಆಧುನಿಕ ಮನಸ್ಸಿನ ಪೊಳ್ಳುತನ, ಅಪ್ರಾಸ್ತುತ ಹಗುರುತನ, ಸ್ಥಿರವಲ್ಲದ ಬದಲಾವಣೆಗೆ ಬೋಧನೆಯ ದೋಷಯುಕ್ತ ಮೂಲತತ್ವಗಳು ಕಾರಣವಾಗಿದೆ. ಹಳೆಯ ವ್ಯವಸ್ಥೆಯಲ್ಲಿ ಇದ್ದಿರಬಹುದಾದ ಒಂದು ಕೊರತೆ ಎಂದರೆ, ವಿದ್ಯಾರ್ಥಿಯು ತದನಂತರದ ಅಧ್ಯಯನದಲ್ಲಿ ತೊಡಗಿಕೊಂಡಾಗ ಆ ಹಿಂದೆ ಆರಂಭದಲ್ಲಿ ಕಲಿತುದು ಅವನ ಮನಸ್ಸಿನಿಂದ ಅಳಸಿ ಹೋಗಬಹುದು ಎಂಬುದು. ಆದರೆ, ಪ್ರಾಚೀನರಿಂದ ಸ್ಮರಣಶಕ್ತಿಗೆ ದೊರೆತ ಅತ್ಯುತ್ತಮ ತರಬೇತಿಯು ಈ ಕೊರತೆಯನ್ನು ಇಲ್ಲವಾಗಿಸುತ್ತಿತ್ತು. ಭವಿಷತ್ತಿನ ಶಿಕ್ಷಣದಲ್ಲಿ ನಾವು ಪ್ರಾಚೀನ ಅಥವಾ ಆಧುನಿಕ ವ್ಯವಸ್ಥೆಗಳಿಗೆ ನಿಷ್ಠರಾಗಿರಬೇಕಿಲ್ಲ; ಆದರೆ, ಜ್ಞಾನವನ್ನು ಗಳಿಸಲು ಹೆಚ್ಚಿನ ಪರಿಪೂರ್ಣ ಹಾಗೂ ತೀವ್ರತರವಾದ ವಿಧಾನವನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ.

ಆಧುನಿಕ ವ್ಯವಸ್ಥೆಗಿರುವ ಸಮರ್ಥನೆ ಎಂದರೆ, ಮಕ್ಕಳ ಗಮನ ಶಕ್ತಿಯು ಸುಲಭವಾಗಿ ದಣಿಯುತ್ತದೆ, ಒಂದೇ ವಿಷಯದಲ್ಲಿ ದೀರ್ಘಾವಧಿ ತೊಡಗಿಕೊಳ್ಳುವುದಕ್ಕೆ ಅದರಿಂದ ಸಾಧ್ಯವಾಗುವುದಿಲ್ಲ; ಹೀಗಾಗಿ ವಿಷಯಗಳನ್ನು ಆಗಾಗ ಬದಲಾಯಿಸುವುದರಿಂದ ಮನಸ್ಸಿಗೆ ವಿಶ್ರಾಂತಿ ಸಿಗುತ್ತದೆ ಎಂದು ಹೇಳಲಾಗುತ್ತಿದೆ. ಹಾಗೆಂದರೆ ಒಂದು ಪ್ರಶ್ನೆ ಸಹಜವಾಗಿ ಹುಟ್ಟಿಕೊಳ್ಳುತ್ತದೆ: ಆಧುನಿಕ ಕಾಲದ ಮಕ್ಕಳು ಪ್ರಾಚೀನ ಕಾಲದ ಮಕ್ಕಳಿಗಿಂತ ಅಷ್ಟೊಂದು ಭಿನ್ನವಾಗಿದ್ದಾರೆಯೇ? ಹೌದು ಎನ್ನುವುದಾದರೆ, ಅವರು ದೀರ್ಘಕಾಲಿಕ ಏಕಾಗ್ರತೆಯನ್ನು ಹೊಂದದಂತೆ ಎದೆಗುಂದಿಸಿದ್ದು ಯಾರು? ನಾವೇ ಅಲ್ಲವೇ? ವಾಸ್ತವವಾಗಿ ತುಂಬ ಚಿಕ್ಕ ಮಗುವೊಂದು ತಾನಾಗಿಯೇ ಒಂದು ವಿಷಯಕ್ಕೆ ಸಂಪೂರ್ಣ ಗಮನ ನೀಡಲು

ಸಮರ್ಥವಾಗಿರುವುದಿಲ್ಲ; ಆದರೆ, ತುಂಬ ಚಿಕ್ಕಮಗು ಯಾವುದೇ ರೀತಿಯ ಶಾಲಾ ಶಿಕ್ಷಣಕ್ಕೆ ಅಸಮರ್ಥವಾಗಿರುತ್ತದೆ. ಏಳೆಂಟು ವರ್ಷ ತುಂಬಿದ ಮಗು - ಇದು ಯಾವುದೇ ನಿಯಮಿತ ರೀತಿಯ ಅಧ್ಯಯನವನ್ನು ಆರಂಭಿಸಲು ಅನುವು ಮಾಡುವಂಥ ಆರಂಭಿಕ ವಯಸ್ಸು ಕೂಡ – ತಾನು ಆಸಕ್ತನಾಗಿದ್ದರೆ ಉತ್ತಮವಾಗಿ ಏಕಾಗ್ರತೆ ಹೊಂದಿರಲು ಸಮರ್ಥನಾಗಿರುತ್ತದೆ. ಆತ್ಯಂತಿಕವಾಗಿ ಆಸಕ್ತಿಯೇ ಏಕಾಗ್ರತೆಯ ಅಡಿಪಾಯ. ಮಗುವಿನ ಪಾಠಗಳನ್ನು ಅತ್ಯಂತವಾಗಿ ಅನಾಸಕ್ತಿದಾಯಕವಾಗಿ ಮಾಡಿ ಅದಕ್ಕೆ ಹೇವರಿಕೆಯನ್ನುಂಟು ಮಾಡಿ, ಅದನ್ನು ಕಠಿಣವಾಗಿ ಮತ್ತು ಒತ್ತಾಯಪೂರ್ವಕವಾಗಿ ಹೇರುವುದನ್ನೇ ಕಲಿಸುವುದರ ತಳಹದಿ ಮಾಡಿಕೊಂಡು ಅನಂತರ, ಮಗುವಿಗೆ ಏಕಾಗ್ರತೆಯಿಲ್ಲವೆಂದು ದೂರುತ್ತೇವೆ! ಸದ್ಯದ ಅಸಹಜ ವ್ಯವಸ್ಥೆಯ ಸ್ಥಾನದಲ್ಲಿ ಮಗುವಿನ ಸಹಜ ಸ್ವಂತ-ಶಿಕ್ಷಣವನ್ನು ಪ್ರತಿಸ್ಥಾಪಿಸುವುದು ಈ ಅಸಮರ್ಥದ ಆರೋಪವನ್ನು ಇಲ್ಲದಂತೆ ಮಾಡುತ್ತದೆ. ಮಗುವೊಂದು ವಿಷಯದಲ್ಲಿ ಆಸಕ್ತಿ ಹೊಂದಿದ್ದರೆ, ಅದನ್ನು ಅರ್ಧಕ್ಕೆ ನಿಲ್ಲಿಸುವ ಬದಲು ಪ್ರೌಢ ಮನುಷ್ಯನಂತೆ ಅದನ್ನು ಆಳವಾಗಿ ಅಧ್ಯಯನ ಮಾಡಲು ಇಷ್ಟಪಡುತ್ತದೆ. ತನ್ನ ವಿಷಯದಲ್ಲಿ ಪಾರಂಗತನಾಗುವ ತನಕ ಅವನಿಗೆ ಹಂತಹಂತವಾಗಿ ಮಾರ್ಗದರ್ಶನ ನೀಡಿ, ಆಯಾ ಹಂತದಲ್ಲಿ ಮಗು ಆಸಕ್ತಿಯಿಂದ ತೊಡಗಿಕೊಳ್ಳುವಂತೆ-ಮೈಮರೆಯುವಂAತೆ ಮಾಡುವುದು ನಿಜವಾದ ಬೋಧನಾ ಕಲೆಯಾಗಿದೆ.

ಶಿಕ್ಷಕನು ಪುಪ್ರಥಮವಾಗಿ ಗಮನ ನೀಡಬೇಕಿರುವುದು ಮಾಧ್ಯಮದ ಕುರಿತು, ಸಾಧನಗಳ ಕುರಿತು. ಇವುಗಳು ಪರಿಪೂರ್ಣಗೊಳ್ಳುವ ಮೊದಲು, ಕೇವಲ ವಿಷಯ ಸಂಖ್ಯೆಗಳ ನಿಯತ ಬೋಧನೆಯನ್ನು ಹೆಚ್ಚಿಸುವುದು ಶಕ್ತಿ ಹಾಗೂ ಸಮಯಗಳ ಪೋಲು ಮಾಡಿದಂತೆ. ಭಾಷೆಯೊಂದನ್ನು ಸುಲಭವಾಗಿ ಮತ್ತು ಕ್ಷಿಪ್ರವಾಗಿ ಗ್ರಹಿಸಲು ಬುದ್ಧಿಯ ಸಾಧನಗಳು ಸಾಕಷ್ಟು ಬೆಳವಣಿಗೆ ಹೊಂದಿದ ಬಳಿಕ ಆತನಿಗೆ ಹಲವು ಭಾಷೆಗಳನ್ನು ಪರಿಚಯಿಸುವುದು ಸರಿಯಾದ ಸಮಯ; ಕೇವಲ ಬೋಧಿಸಿದ್ದನ್ನು ಅವನು ಭಾಗಶಃ ಅರ್ಥ ಮಾಡಿಕೊಳ್ಳುವ ಸ್ಥಿತಿಯಲ್ಲಿದ್ದು ಅದನ್ನು ಪ್ರಾಯಸಕರವಾಗಿ ಮತ್ತು ಅಪರಿಪೂರ್ಣವಾಗಿ ಕರಗತ ಮಾಡಿಕೊಳ್ಳುವ ಸ್ಥಿಯಲ್ಲಿರುವಾಗ ಅಲ್ಲ. ಇಷ್ಟೇ ಅಲ್ಲ, ತನ್ನ ಮಾತೃಭಾಷೆಯನ್ನು ಚೆನ್ನಾಗಿ ಬಲ್ಲ ಮಗು, ಇನ್ನೊಂದನ್ನು ಕರಗತ ಮಾಡಿಕೊಳ್ಳಲು ಒಂದು ಅತ್ಯಂತ ಅಗತ್ಯವಾದ ಸಾಮರ್ಥ್ಯವನ್ನು ಹೊಂದಿರುತ್ತಾನೆ. ತನ್ನ ಮಾತೃಭಾಷೆಯಲ್ಲಿ ಭಾಷಿಕ ಸಾಮರ್ಥ್ಯಗಳನ್ನು ಅತೃಪ್ತಿಕರವಾಗಿ ಬೆಳೆಸಿಕೊಂಡಿರುವ ವಿದ್ಯಾರ್ಥಿಗೆ ಬೇರೆ ಭಾಷೆಯೊಂದನ್ನು ಕರಗತ ಮಾಡಿಕೊಳ್ಳಲು ಅಸಾಧ್ಯವಾಗುತ್ತದೆ. ಹೆಚ್ಚು ಬೆಳವಣಿಗೆ ಹೊಂದಿರದ ಪರಿವೀಕ್ಷಣೆ, ವಿವೇಚನೆ, ತರ್ಕ ಮತ್ತು ತುಲನೆ ಮಾಡುವಂಥ ಸಾಮರ್ಥ್ಯಗಳ ಮೂಲಕ ವಿಜ್ಞಾನವನ್ನು ಅಧ್ಯಾಯನ ಮಾಡುವುದು ಅನುಪಯುಕ್ತ ಮತ್ತು ವ್ಯರ್ಥ ಶ್ರಮ. ಇದು ಉಳಿದ ವಿಷಯಗಳ ಮಟ್ಟಿಗೂ ನಿಜ.

ಮಾತೃಭಾಷೆಯು ಶಿಕ್ಷಣದ ಸರಿಯಾದ ಮಾಧ್ಯಮ. ಆದುದರಿಂದ, ಮಗುವಿನ ಬಾಲ್ಯದ ಶಕ್ತಿಗಳು ಆ ಮಾಧ್ಯಮವನ್ನು ಸಂಪೂರ್ಣವಾಗಿ ಕರಗತ ಮಾಡಿಕೊಳ್ಳುವತ್ತ ನಿರ್ದೇಶಿತವಾಗಬೇಕು. ಬಹುತೇಕ ಪ್ರತಿ ಮಗುವೂ ಕಲ್ಪನಾಶಕ್ತಿ, ಪದಗಳಿಗೆ ಸ್ಪಂದಿಸುವ ಸಹಜ ಪ್ರವೃತ್ತಿ, ಗಮನಾರ್ಹ ಸಾಮರ್ಥ್ಯ, ಆಲೋಚನೆ ಮತ್ತು ಕಲ್ಪನಾಶಕ್ತಿಯ ಸಂಪತ್ತನ್ನು ಹೊಂದಿರುತ್ತದೆ. ಇವೆಲ್ಲವೂ ಸಾಹಿತ್ಯ ಮತ್ತು ರಾಷ್ಟ್ರದ ಇತಿಹಾಸಗಳಲ್ಲಿ ಆಸಕ್ತಿ ಹೊಂದಬೇಕು. ಉತ್ಸಾಹಶೂನ್ಯ ಮತ್ತು ಅಹಿತಕರವಾದ ಕಾರ್ಯ ಎಂದು ಪರಿಗಣಿಸಲಾಗುವ ಬೇಸರ ತರಿಸುವ ಪುಸ್ತಕಗಳ ಓದು ಮತ್ತು ಸ್ವಾರಸ್ಯವಿಲ್ಲದ ಶುಷ್ಕ ಕಾಗುಣಿತಗಳ ಬದಲು, ಆ ಮಗುವಿನ ತನ್ನದೇ ಆದ ಸಾಹಿತ್ಯದ ತುಂಬ ಇರುವ ಆಸಕ್ತಿದಾಯಕ ಭಾಗಗಳು ಹಾಗೂ ಅದರ ಹಿಂದಿನ ಮತ್ತು ಸುತ್ತಮುತ್ತಲಿನ ಜೀವನದ ಆಸಕ್ತಿದಾಯಕ ಸಂಗತಿಗಳನ್ನು, ನಾನು ತಿಳಿಸಿದಂಥ ಗುಣಗಳಿಗೆ ಆಕರ್ಷಕವಾಗಿರುವಂತೆ ಮತ್ತು ಪ್ರೇರಣೆಯನ್ನೊದಗಿಸುವಂತೆ ಆ ಮಗುವಿಗೆ ಆಸಕ್ತಿದಾಕವಾಗಿರುವ ರೀತಿಯಲ್ಲಿ ತ್ವರಿತವಾಗಿ ಮುಂದಿನ ಹಂತಗಳನ್ನು

ಕಲಿಸುವುದರ ಮೂಲಕ ಪರಿಚಯ ಮಾಡಿಕೊಡಬೇಕಾಗಿದೆ. ಈ ಅವಧಿಯಲ್ಲಿನ ಇನ್ನಿತರ ಎಲ್ಲ ಅಧ್ಯಯನಗಳನ್ನು ಮಾನಸಿಕ ಕಾರ್ಯವಿಧಾನಗಳ ಮತ್ತು ನೈತಿಕ ಚಾರಿತ್ರ÷ೖಯದ ಪರಿಪೂರ್ಣತೆ ಬೆಳೆಸಲು ಮುಡಿಪಾಗಿರಿಸಬೇಕು. ಈ ಸಮಯದಲ್ಲಿ ಇತಿಹಾಸ, ವಿಜ್ಞಾನ, ತತ್ವಜ್ಞಾನ, ಕಲೆಯ ಅಧ್ಯಯನಕ್ಕೆ ಅಡಿಪಾಯ ಹಾಕಬೇಕು, ಆದರೆ ಅದು ನೇರ ಮತ್ತು ಔಪಚಾರಿಕ ರೀತಿಯಲ್ಲಿ ಆಗಬಾರದು. ಪ್ರತಿಯೊಂದು ಮಗುವು ಆಸಕ್ತಿದಾಯಕ ಕಥೆಗಳನ್ನು ಇಷ್ಟಪಡುತ್ತದೆ, ವೀರಾರಾಧಕ ಹಾಗೂ ದೇಶಭಕ್ತ ಆತನಲ್ಲಿರುವ ಈ ಗುಣಗಳನ್ನು ಪ್ರೇರಿಸಿ. ಮತ್ತು ಆ ಮೂಲಕವೇ ಮಗುವು ತನ್ನ ರಾಷ್ಟ್ರದ ಜೀವಂತ ಹಾಗೂ ಮಾನವ ಇತಿಹಾಸದ ಭಾಗಗಳನ್ನು ಸಹಜವಾಗಿ ಅರಗಿಸಿಕೊಳ್ಳಲಿ. ಪ್ರತಿಯೊಂದು ಮಗುವು ಅನ್ವೇಷಕ, ಸಂಶೋಧಕ, ವಿಶ್ಲೇಷಕ, ನಿರ್ಭಾವುಕ ಅಂಗಶಾಸ್ತ್ರಜ್ಞನಾಗಿರುತ್ತದೆ. ಅವನಲ್ಲಿನ ಈ ಗುಣಗಳನ್ನು ಪ್ರೇರಿಸುವಂತೆ, ವಿಜ್ಞಾನಿಯ ಸರಿಯಾದ ಮನೋಧರ್ಮ ಮತ್ತು ಅಗತ್ಯ ಮೂಲಭೂತ ಜ್ಞಾನವನ್ನು ಸಹಜವಾಗಿ ಗಳಿಸಿಕೊಳ್ಳಲಿ. ಪ್ರತಿಯೊಂದು ಮಗು ತಣಿಯಲಾರದ ಬೌದ್ಧಿಕ ಕುತೂಹಲ ಮತ್ತು ಆಧ್ಯಾತ್ಮಿಕ ಶೋಧನಾಶಕ್ತಿ ಹೊಂದಿರುತ್ತದೆ. ಈ ಜಗತ್ತು ಮತ್ತು ತನ್ನನ್ನು ಅರಿಯಲು ಈ ಶಕ್ತಿಯನ್ನು ನಿಧಾನವಾಗಿ ಬಳಸಿಕೊಳ್ಳಿ. ಪ್ರತಿಯೊಂದು ಮಗುವು ಅನುಕರಣೆಯ ಮತ್ತು ತುಸು ಕಲ್ಪನಾಶಕ್ತಿಯನ್ನು ಕೊಡುಗೆಯಾಗಿ ಪಡೆದಿರುತ್ತದೆ. ಮಗುವು ಕಲಾವಿದನ ಸಾಮರ್ಥ್ಯದ ಬುನಾದಿ ಗಳಿಸಿಕೊಳ್ಳಲು ಇದನ್ನು ಬಳಸಿಕೊಳ್ಳಿ.

ಪ್ರಕೃತಿಯು ತನ್ನ ಕೆಲಸವನ್ನು ಮಾಡಲು ಅನುವುಮಾಡಿಕೊಡುವುದರ ಮೂಲಕ, ಆಕೆ ನಮ್ಮ ಮೇಲೆ ಕೃಪೆದೋರಿ ನೀಡಿದ ಕೊಡುಗೆಗಳ ಪ್ರಯೋಜನವನ್ನು ಪಡೆಯುತ್ತೇವೆ. ಆದರೆ ಮಾನವಕುಲವು ತನ್ನ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದಂತೆ ಆಕೆಯ ಪ್ರಕ್ರಿಯೆಗಳಿಗೆ ಹಾನಿ ಮಾಡುವ-ಅಡ್ಡಿಪಡಿಸುವ ದಾರಿಯನ್ನು ಆಯ್ದುಕೊಂಡಿದೆ. ಹಾಗೆ ಮಾಡುವ ಮೂಲಕ ತನ್ನ ಪ್ರಗತಿಯ ವೇಗಕ್ಕೆ ತಾನೇ ಹಾನಿ ಎಸಗಿ ಅಡ್ಡಿಪಡಿಸಿಕೊಂಡಿದೆ. ಸಂತೋಷದ ಸಂಗತಿ ಎಂದರೆ ವಿವೇಚನಾಪೂರ್ಣ ಆಲೋಚನೆಗಳು ಈಗ ಪ್ರಭಾವ ಬೀರುತ್ತಿವೆ. ಆದರೆ, ಅದಕ್ಕೊಂದು ದಾರಿಯನ್ನು ಇನ್ನೂ ಕಂಡುಕೊಂಡಿಲ್ಲ. ತನ್ನೆಲ್ಲ ಪೂರ್ವಗ್ರಹ ಮತ್ತು ದೋಷಗಳಿಂದ ಕೂಡಿದ ಭೂತಕಾಲವು ನಮ್ಮನ್ನು ತಡೆಯುತ್ತಿದೆ, ಮತ್ತು ಅದು ನಮ್ಮನ್ನು ಬಿಡುವುದಿಲ್ಲ; ನಮ್ಮ ಸರ್ವಜ್ಞ ಮಾತೆಯ ಮಾರ್ಗದರ್ಶನಕ್ಕಾಗಿ ನಾವು ಮಾಡುವ ಎಲ್ಲ ಆಮೂಲಾಗ್ರ ಪ್ರಯತ್ನಗಳಲ್ಲಿ ಆ ಭೂತಕಾಲವು ಮಧ್ಯಪ್ರವೇಶಿಸುತ್ತದೆ. ನಾವು ಸುಸ್ಪಷ್ಟವಾದ ಜ್ಞಾನವನ್ನು ಪಡೆಯುವ ಧೈರ್ಯ ಹೊಂದಿ, ಭವಿಷ್ಯದ ಪೀಳಿಗೆಯ ಒಳಿತಿಗಾಗಿ ಅದನ್ನು ನಿರ್ಭೀತವಾಗಿ ಬಳಸಬೇಕು. ವಿಷಯಗಳನ್ನು ತುಣುಕುಗಳಾಗಿ ನೀಡಿ ಕಲಿಸುವುದಕ್ಕೆ ಶಾಶ್ವತ ತಿಲಾಂಜಲಿ ಕೊಡಬೇಕು. ಮಗುವಿನ ಜ್ಞಾನ ಸಾಧನಗಳನ್ನು ಪರಿಪೂರ್ಣವಾಗಿ ಬೆಳೆಸಲು, ಆತನು ಉಪಯೋಗಿಸಬೇಕಾದ ಮಾಧ್ಯಮವನ್ನು ಕರಗತ ಮಾಡಿಕೊಳ್ಳಲು ಮಾಡಬೇಕಾದ ಮೊದಲ ಕೆಲಸವೆಂದರೆ, ಮಗುವಿಗೆ ಜೀವನ, ಕೆಲಸ ಮತ್ತು ಜ್ಞಾನದಲ್ಲಿ ಆಸಕ್ತಿ ತಳೆಯುವಂತೆ ಮಾಡುವುದಾಗಿರುತ್ತದೆ. ಇದರಿಂದ ಕಲಿಕೆಯಲ್ಲಿನ ವೇಗವು ಹೆಚ್ಚಿ ಅವನ ನಿತ್ಯದ ಅಧ್ಯಯನದಲ್ಲಾಗುವ ವಿಳಂಬದ ಪರಿಣಾಮವನ್ನು ಇಲ್ಲವಾಗಿಸಿ, ಕೆಲವು ವಿಷಯಗಳನ್ನು ಸರಿಯಿರದ ರೀತಿಯಲ್ಲಿ ಕಲಿಯುವುದು ತಪ್ಪಿ, ಅನೇಕ ವಿಷಯಗಳನ್ನು ಸಂಪೂರ್ಣವಾಗಿ ಕಲಿಯುವನು ಎಂಬುದನ್ನು ಕಂಡುಕೊಳ್ಳುತ್ತೇವೆ.

# V

# ಇಂದ್ರಿಯಗಳ ತರಬೇತಿ

ಜ್ಞಾನಕ್ಕೆ ರಾಯಭಾರಿಗಳಾಗಿ ಕಾರ್ಯನಿರ್ವಹಿಸುವ ಆರು ಇಂದ್ರಿಯಗಳಿವೆ - ದೃಷ್ಟಿ, ಆಲಿಸುವುದು, ವಾಸನೆ, ಸ್ಪರ್ಶ, ರುಚಿ, ಮನಸ್ಸು. ಕೊನೆಯದೊಂದನ್ನು ಹೊರತುಪಡಿಸಿ ಉಳಿದೆಲ್ಲವೂ ಹೊರಮುಖವಾಗಿದ್ದು, ಇವು ಚಿಂತನಾ ವಸ್ತುವನ್ನು ದೈಹಿಕ ನರಗಳು ಹಾಗೂ ಅದರ ತುದಿಯ ಅಂಗರಚನೆಗಳಾದ ಕಣ್ಣು, ಕಿವಿ, ಮೂಗು, ಚರ್ಮ, ರಸನೇಂದ್ರಿಯಗಳಿಂದ ಸಂಗ್ರಹಿಸುತ್ತವೆ. ವಿಚಾರಕ್ಕೆ ರಾಯಭಾರಿಗಳಾಗಿರುವ ಈ ಇಂದ್ರಿಯಗಳು ಪರಿಪೂರ್ಣವಾಗಿರುವಂತೆ ಮಾಡುವುದು ಶಿಕ್ಷಕನ ಪ್ರಪ್ರಥಮ ಕಾಳಜಿಗಳಲ್ಲಿ ಒಂದಾಗಿರಬೇಕು. ಈ ಇಂದ್ರಿಯಗಳಿಗೆ ಎರಡು ಸಂಗತಿಗಳು ಅತ್ಯವಶ್ಯಕ – ನಿಖರತೆ ಮತ್ತು ಸಂವೇದನತ್ವ (sensitiveness) ಇಂದ್ರಿಯಗಳ ನಿಖರತೆ ಮತ್ತು ಸಂವೇದನತ್ವಕ್ಕೆ ಇರುವ ಅಡೆತಡೆಗಳನ್ನು ನಿವಾರಿಸಲು ಅತ್ಯುತ್ತಮ ಹೆಜ್ಜೆಗಳನ್ನು ತೆಗೆದುಕೊಳ್ಳಬೇಕೆಂದರೆ ನಾವು ಮೊಟ್ಟಮೊದಲು ಅಡೆತಡೆಗಳಾವುವು ಎಂಬುದನ್ನು ಅರ್ಥಮಾಡಿಕೊಳ್ಳಬೇಕಿದೆ. ಪರಿಪೂರ್ಣತೆಯನ್ನು ಸಾಧಿಸಬಯಸುವವರು ಅಪರಿಪೂರ್ಣತೆಗೆ ಇರುವ ಕಾರಣಗಳನ್ನು ಮೊದಲು ಅರ್ಥ ಮಾಡಿಕೊಳ್ಳಬೇಕು.

ಇಂದ್ರಿಯಗಳು ತಮ್ಮ ನಿಖರತೆ ಮತ್ತು ಸಂವೇದನತ್ವಕ್ಕೆ ಮಾಹಿತಿಯನ್ನು ತಲುಪಿಸುವ ದಾರಿಗಳಾಗಿರುವ ನರಗಳ ಅಡೆತಡೆಯಿಲ್ಲದ ಕ್ರಿಯೆಗಳು ಮತ್ತು ಸ್ವೀಕರ್ತನಾಗಿರುವ ಮನಸ್ಸಿನ ನಿರ್ಲಿಪ್ತ ಸ್ವೀಕರಣವನ್ನು ಅವಲಂಬಿಸಿರುತ್ತವೆ. ಅಂಗಗಳು ಸ್ವಾಭಾವಿಕವಾಗಿ ತಮ್ಮ ಕಾರ್ಯಗಳನ್ನು ಸಂಪೂರ್ಣವಾಗಿ ನಿರ್ವಹಿಸುತ್ತವೆ. ಕಣ್ಣು ಸರಿಯಾದ ರೂಪವನ್ನು ತಲುಪಿಸುತ್ತದೆ, ಕಿವಿಯು ಸರಿಯಾದ ಶಬ್ದವನ್ನು ತಲುಪಿಸುತ್ತದೆ, ನಾಲಿಗೆಯು ಸರಿಯಾದ ರುಚಿಯನ್ನು ತಲುಪಿಸುತ್ತದೆ, ಚರ್ಮವು ಸರಿಯಾದ ಸ್ಪರ್ಶವನ್ನು ತಲುಪಿಸುತ್ತದೆ, ಮೂಗು ಸರಿಯಾದ ವಾಸನೆಯನ್ನು ತಲುಪಿಸುತ್ತದೆ. ನಾವು ಕಣ್ಣಿನ ಕ್ರಿಯೆಯ ಅಧ್ಯಯನ ಮಾಡುವುದನ್ನು ಒಂದು ಮುಖ್ಯ ಉದಾಹರಣೆಯನ್ನಾಗಿ ತೆಗೆದುಕೊಂಡರೆ ಇದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದು. ಅಕ್ಷಿಪಟಲದ ಮೇಲೆ ಸರಿಯಾದ ಚಿತ್ರವು ಅನೈಚ್ಛಿಕವಾಗಿ ಪ್ರತಿರೂಪಿತವಾಗುತ್ತದೆ, ಅದನ್ನು ಗ್ರಹಿಸುವುದರಲ್ಲಿ ಏನಾದರೂ ದೋಷವಿದ್ದರೆ, ಅದು ಅಂಗದ ದೋಷವಾಗಿರದೇ, ಬೇರೆ ಯಾವುದೋ ಒಂದರ ದೋಷವಾಗಿರುತ್ತದೆ.

ದೋಷವು ನರಗಳ ಹರಿವುಗಳಲ್ಲಿ ಇರಬಹುದು. ನರಗಳು ಕಾಲುವೆಗಳಲ್ಲದೇ ಬೇರೆ ಏನೂ ಅಲ್ಲ; ಮೂಲತಃ ಅಂಗಗಳಿಂದ ಬಂದಿರುವ ಮಾಹಿತಿಯನ್ನು ಬದಲಾಯಿಸುವ ಶಕ್ತಿ ಅವುಗಳಿಗಿಲ್ಲ. ಕಾಲುವೆಯಲ್ಲಿ ಅಡಚಣೆಗಳಿರಬಹುದು ಮತ್ತು ಅದು ಮಾಹಿತಿಯ ಪೂರ್ಣತೆ ಹಾಗೂ ನಿಖರತೆಯಲ್ಲಿ ಹಸ್ತಕ್ಷೇಪ ಮಾಡಬಹುದು, ಆದರೆ ಮಾಹಿತಿಯು ಅಂಗವನ್ನು ತಲುಪುವಲ್ಲಿ ಅಗತ್ಯವಾಗಿ ಹಾಗೂ ಸಹಜವಾಗಿ ಪರಿಪೂರ್ಣವಾಗಿಯೇ ಇದ್ದು, ಮನಸ್ಸನ್ನು ತಲುಪುವಲ್ಲಿ ಅಡಚಣೆಗಳು ಉಂಟಾಗಬಹುದು. ಇದಕ್ಕೊಂದು ಅಪವಾದವೆಂದರೆ ಸಾಧನವಾಗಿರುವ ಅಂಗದಲ್ಲಿ ಪ್ರಾಕೃತಿಕ ದೋಷವಿರುವ ಸಂದರ್ಭ ಮಾತ್ರವಾಗಿರುತ್ತದೆ. ಆಗ ಅದು ವೈದ್ಯರಿಗೆ ಸಂಬಂಧಿಸಿದ ವಿಷಯವಾಗುತ್ತದೆ ವಿನಃ ಶಿಕ್ಷಕತಜ್ಞನಿಗೆ ಸಂಬಂಧಿಸಿದ್ದಾಗಿರುವುದಿಲ್ಲ.

ಮನಸ್ಸಿಗೆ ಮಾಹಿತಿಯು ತಲುಪಲಾರದ ರೀತಿಯ ಅಡೆತಡೆಯಾಗಿದ್ದರೆ, ಅದು ಇಂದ್ರಿಯಗಳ ಅಸಮರ್ಪಕ ಸಂವೇದನತ್ವದ ಫಲವಾಗಿರುತ್ತದೆ. ನೋಟ, ಆಲಿಸುವಿಕೆ, ವಾಸನೆ, ಸ್ಪರ್ಶ, ರುಚಿ, ಅರಿವಳಿಕೆಯ ವಿವಿಧ ಪ್ರಮಾಣದಲ್ಲಿನ ದೋಷಗಳನ್ನು, ಶಾರೀರಿಕ ಗಾಯದ ಪರಿಣಾಮ ಅಥವಾ ಅಂಗದಲ್ಲಿ ದೋಷ ಇಲ್ಲದಿದ್ದಾಗ ಇವೆಲ್ಲವೂ ಸರಿಪಡಿಸಲು ಸಾಧ್ಯವಿರುವಂಥವು. ನರವ್ಯೂಹ ವ್ಯವಸ್ಥೆಯನ್ನು ಶುದ್ಧಗೊಳಿಸುವ ಮೂಲಕ ಅಡಚಣೆಗಳನ್ನು ತೆಗೆದುಹಾಕಬಹುದು ಮತ್ತು ಸಂವೇದನತ್ವಲ್ಲಿನ ದೋಷವನ್ನು ಸರಿಪಡಿಸಬಹುದು. ಉಸಿರಾಟದ ನಿಯಂತ್ರಣ ಇದಕ್ಕೊಂದು ಸರಳ ಪರಿಹಾರವಾಗಿದೆ. ಬೇರೆಬೇರೆ ಕಾರಣಗಳು ಮತ್ತು ಉದ್ದೇಶಗಳಿಂದಾಗಿ ಈಗಿದು ಯುರೋಪಿನಲ್ಲಿ ಹೆಚ್ಚು ಜನಪ್ರಿಯವಾಗುತ್ತಿದೆ. ಅನಿವಾರ್ಯವಾಗಿ ಈ ಪ್ರಕ್ರಿಯೆಯು ಕಾಲುವೆಗಳ ಪರಿಪೂರ್ಣ ಹಾಗೂ ಅಡೆತಡೆಯಿಲ್ಲದ ಕಾರ್ಯಗಳನ್ನು ಪುನಃಸ್ಥಾಪಿಸುತ್ತದೆ. ಇದನ್ನು ಸರಿಯಾಗಿ ಕಟ್ಟುನಿಟ್ಟಾಗಿ ಮಾಡಿದರೆ, ಅದು ಇಂದ್ರಿಯಗಳ ಉನ್ನತ ಕಾರ್ಯಶೀಲತೆಯತ್ತ ಕೊಂಡೊಯ್ಯುತ್ತದೆ. ಈ ಪ್ರಕ್ರಿಯೆಯನ್ನು ಯೋಗ ಶಾಸ್ತ್ರದಲ್ಲಿ 'ನಾಡಿ ಶುದ್ಧಿ' ಎಂದು ಕರೆಯಲಾಗುತ್ತದೆ.

ಕಾಲುವೆಯಲ್ಲಿನ ಅಡಚಣೆಯು ಮಾಹಿತಿಯನ್ನು, ಅದು ಎಷ್ಟೇ ಸಣ್ಣ ಪ್ರಮಾಣದಲ್ಲಿದ್ದರೂ, ಪೂರ್ಣವಾಗಿ ತಡೆಯುವಂಥದ್ದಾಗಿರುವುದಿಲ್ಲ, ಆದರೆ ಅದು ಮಾಹಿತಿಯನ್ನು ವಿರೂಪಗೊಳಿಸುವ ರೀತಿಯದ್ದಾಗಿರಬಹುದು. ಇದಕ್ಕೆ ಪರಿಚಿತ ಉದಾಹರಣೆ ಎಂದರೆ ಇಂದ್ರಿಯದ ಕ್ರಿಯೆಯ ಮೇಲೆ ಭಯ ಅಥವಾ ಗಾಬರಿಯಾಗುವ ಪರಿಣಾಮವಾಗಿರುತ್ತದೆ. ಭಯದಿಂದ ಬೆಚ್ಚಿಬೀಳುವ ಕುದುರೆಗೆ ರಸ್ತೆಯ ಮೇಲಿನ ಚೀಲವು ಒಂದು ಅಪಾಯಕಾರಿ ಜೀವಿಯೆಂದೂ; ಭಯದಿಂದ ಬೆಚ್ಚಿಬೀಳುವ ಮನುಷ್ಯನಿಗೆ ಹಗ್ಗವು ಹಾವು ಎಂದೂ, ಅಲುಗಾಡುತ್ತಿರುವ ಪರದೆಯು ಭೂತವೆಂದೂ ಅನಿಸುತ್ತದೆ. ನರ ವ್ಯವಸ್ಥೆಯಲ್ಲಿನ ಚಟುವಟಿಕೆಗಳಿಂದಾಗಿ ಕಾಣಿಸಿಕೊಳುವ ಎಲ್ಲ ವಿರೂಪಗಳು, ನರ ಕಾಲುವೆಯಲ್ಲಿ ಕ್ರಿಯಾಶೀಲವಾಗಿರುವ ಸಂವೇಗಾತ್ಮಕ ಅಡಚಣೆಯಿಂದಾಗಿದೆ ಎನ್ನುವುದನ್ನು ಗುರುತಿಸಬಹುದು. ಇದಕ್ಕಿರುವ ಒಂದೇ ಪರಿಹಾರವೆಂದರೆ ಶಾಂತವಾಗಿರುವ ಅಭ್ಯಾಸ ಮತ್ತು ನರಗಳು ಸ್ಥಿರವಾಗಿರುವುದನ್ನು ರೂಢಿಮಾಡಿಕೊಳ್ಳಬೇಕಿದೆ. ಇದನ್ನು ವ್ಯವಸ್ಥೆಯನ್ನು ನಿರಾತಂಕವಾಗಿರಿಸುವ, ಎಲ್ಲಾ ಆಂತರಿಕ ಪ್ರಕ್ರಿಯೆಗಳಿಗೂ ಉದ್ದೇಶಪೂರ್ವಕ ಶಾಂತತೆಯನ್ನು ನೀಡುವ ಮತ್ತು ಮನಸ್ಸನ್ನು ಶುದ್ಧೀಕರಣಕ್ಕೆ ಸಿದ್ಧಪಡಿಸುವ 'ನಾಡಿ ಶುದ್ಧಿ' ಯ ಮೂಲಕ ಸಹ ಮಾಡಬಹುದು.

ನರವ್ಯೂಹ ಕಾಲುವೆಗಳು ಶಾಂತವಾಗಿಯೂ ನಿಚ್ಚಳವಾಗಿಯೂ ಇದ್ದರೆ, ಮನಸ್ಸಿಂದ ಅಥವಾ ಮನಸ್ಸಿನ ಮೂಲಕ ಮಾತ್ರ ಮಾಹಿತಿಯ ಅಡಚಣೆ ಉಂಟಾಗುವ ಸಾಧ್ಯತೆ ಇರುತ್ತದೆ. ಈಗ, 'ಮನಸ್ಸು' ಅಥವಾ ಅತೀಂದ್ರಿಯ ಜ್ಞಾನ ಎಂಬುದು ನರಗಳಂತೆಯೇ 'ಬುದ್ಧಿ' ಅಥವಾ ಮೆದುಳಿನ ಶಕ್ತಿಯೊಂದಿಗೆ ಸಂವಹನ ಮಾಡುವ ಒಂದು ಕಾಲುವೆಯಾಗಿರುತ್ತದೆ. ಅಡಚಣೆಯು ಮೇಲಿನಿಂದಲೂ ಆಗಬಹುದು ಅಥವಾ ಕೆಳಗಿನಿಂದಲಾದರೂ ಆಗಬಹುದು. ಹೊರಗಿನ ಮಾಹಿತಿಯನ್ನು ಸಂವೇದನಾ ಅಂಗಗಳು ಮೊದಲು ಗ್ರಹಿಸುತ್ತವೆ, ಅನಂತರ ಒಳಗಿನ ನರವ್ಯೂಹದ ಇನ್ನೊಂದು ತುದಿಯಾದ 'ಚಿತ್ತ' ಅಥವಾ ನಿರ್ಲಿಪ್ತ ಸ್ಮೃತಿಯ ಮೇಲೆ ಪ್ರತಿರೂಪಿತವಾಗುತ್ತದೆ. ದೃಷ್ಟಿ, ಶಬ್ದ, ವಾಸನೆ, ಸ್ಪರ್ಶ ಮತ್ತು ರುಚಿಗಳ ಎಲ್ಲ ಚಿತ್ರಗಳು ಅಲ್ಲಿ ಶೇಖರಗೊಳ್ಳುತ್ತವೆ; 'ಮನಸ್ಸು' ಅವುಗಳನ್ನು 'ಬುದ್ಧಿಗೆ' ತಿಳಿಸುತ್ತದೆ. ಈ 'ಮನಸ್ಸು' ಇಂದ್ರಿಯ ಅಂಗವೂ ಹೌದು - ಕಾಲುವೆಯೂ ಹೌದು. ಇಂದ್ರಿಯ ಅಂಗವಾಗಿ ಅದು ಇನ್ನಿತರ ಇಂದ್ರಿಯಗಳಂತೆ ಸಹಜವಾಗಿಯೇ ಪರಿಪೂರ್ಣವಾಗಿರುವಂಥದು; ಕಾಲುವೆಯಾಗಿ ಅದು ಅಡಚಣೆಗೆ ಒಳಪಡುವ ಸಾಧ್ಯತೆ ಇದ್ದು ತಡೆ ಅಥವಾ ವಿಕೃತರೂಪದಲ್ಲಿ ಪರಿಣಮಿಸುತ್ತದೆ.

ಒಂದು ಜ್ಞಾನೇಂದ್ರಿಯವಾಗಿ ಮನಸ್ಸು ವಿಚಾರ-ಅನಿಸಿಕೆಗಳನ್ನು ಹೊರಗಿನಿಂದಲೂ ಒಳಗಿನಿಂದಲೂ ನೇರವಾಗಿ ಪಡೆದುಕೊಳ್ಳುತ್ತದೆ. ಈ ಅನಿಸಿಕೆಗಳು ಸಹಜವಾಗಿ ಪರಿಪೂರ್ಣವಾಗಿ ಸರಿಯಾಗಿರುತ್ತವೆ. ಆದರೆ, ಅವು ಬುದ್ಧಿಗೆ ವರದಿ ಮಾಡಿಕೊಳ್ಳುವಾಗ

ಒಂದೋ ಅವು ಬುದ್ಧಿಯನ್ನು ತಲುಪುವುದೇ ಇಲ್ಲ ಅಥವಾ ತಪುರ್ಣವ ಇಲ್ಲವೇ ಭಾಗಶಃ ತಪ್ಪು ಅಭಿಪ್ರಾಯ ಮೂಡಿಸುವಷ್ಟು ವಿಕೃತವಾಗಿ ತಲುಪುತ್ತವೆ. ಕಣ್ಣು, ಕಿವಿ, ಮೂಗು, ಚರ್ಮ ಅಥವಾ ರಸನೇಂದ್ರಿಯದ ಮಾಹಿತಿಯೊಂದಿಗೆ ಒಡಗೂಡಿರುವ ಅನಿಸಿಕೆಯನ್ನು ಅಡಚಣೆಯು ಪ್ರಭಾವಿಸಬಹುದು, ಆದರೆ ಇಲ್ಲಿ ಅದರ ಶಕ್ತಿ ತುಂಬ ಕಡಮೆ ಇರುತ್ತದೆ. ಮನಸ್ಸಿನ ನೇರ ಭಾವನೆಗಳ ಮೇಲೆ ಪ್ರಭಾವ ಬೀರುವಲ್ಲಿ ಇದು ತುಂಬ ಶಕ್ತಿಯುತವಾಗಿರುತ್ತದೆ, ಅದೇ ವೇಳೆ ದೋಷದ ಮುಖ್ಯ ಮೂಲವೂ ಆಗಿರುತ್ತದೆ. ಮನಸ್ಸು ಮುಖ್ಯವಾಗಿ ವಿಚಾರದ ನೇರ ಅನಿಸಿಕೆಗಳನ್ನು ತೆಗೆದುಕೊಳ್ಳುತ್ತದೆ. ಜೊತೆಗೆ ರೂಪ, ಶಬ್ದ ಹಾಗೂ ಸಾಮಾನ್ಯವಾಗಿ ಇಂದ್ರಿಯ ಅಂಗಗಳನ್ನು ಆಧರಿಸುವ ಎಲ್ಲಾ ವಿಷಯಗಳಿಗೂ ಸಂಬಂಧಿಸಿದ್ದನ್ನು ತೆಗೆದುಕೊಳ್ಳುತ್ತದೆ. ಮನಸ್ಸಿನ ಈ ಸಂವೇದತ್ವ ಸಂಪೂರ್ಣ ಬೆಳವಣಿಗೆಯನ್ನು ಯೋಗಶಾಸ್ತ್ರದಲ್ಲಿ 'ಸೂಕ್ಷ್ಮದೃಷ್ಟಿ' ಅಥವಾ ಚಿತ್ರಗಳ ಸೂಕ್ಷ್ಮಗ್ರಾಹಿತ್ವ ಎಂದು ಕರೆಯಲಾಗುತ್ತದೆ. ದೂರ ಸಂವೇದನೆ (telepathy), ಅತೀಂದ್ರೀಯ ದೃಷ್ಟಿ (clairvoyance), ಅತೀಂದ್ರೀಯ ಶ್ರವಣಶಕ್ತಿ (clairaudience), ಮುನ್ನರಿವು (presentiment), ವಿಶೇಷ ಸಂವೇದನಾ ಗ್ರಹಿಕೆ (thought-reading), ಚಾರಿತ್ರ್ಯ ಗ್ರಹಿಕೆ (character-reading) ಇತ್ಯಾದಿ ಅನೇಕ ಆಧುನಿಕ ಶೋಧನೆಗಳು ಅಭಿವೃದ್ಧಿ ಹೊಂದದೇ ಉಳಿದಿರುವ ಮನಸ್ಸಿಗೆ ಸಂಬಂಧಿಸಿದ ಪ್ರಾಚೀನ ಶಕ್ತಿಗಳಾಗಿದ್ದು, ಇವೆಲ್ಲವೂ 'ಮನಸ್ಸಿಗೆ' ಸಂಬಂಧಿಸಿವೆ. ಈ ಅತೀಂದ್ರಿಯ ಜ್ಞಾನ ಬೆಳವಣಿಗೆಯನ್ನು ಮಾನವ ತರಬೇತಿಯ ಭಾಗವಾಗಿ ಎಂದೂ ಪರಿಗಣಿಸಲಾಗಿಲ್ಲ. ಆದರೆ, ಮುಂದಿನ ದಿನಮಾನಗಳಲ್ಲಿ ಮನುಷ್ಯನ ತರಬೇತಿಯಲ್ಲಿ ಇದೊಂದು ಅಗತ್ಯವಾದ ಬಹು ಮುಖ್ಯ ಸ್ಥಾನವನ್ನು ಪಡೆಯುತ್ತದೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಅದಕ್ಕೆ ಮೊದಲೂ ಮನಸ್ಸು ಬುದ್ಧಿಗೆ ಸರಿಯಾದ ವರದಿಯನ್ನು ಸಲ್ಲಿಸುವಂತೆ ಅದನ್ನು ಏಕೆ ತರಬೇತುಗೊಳಿಸಬಾರದು ಎಂಬುದಕ್ಕೆ ಯಾವ ಕಾರಣವೂ ಇಲ್ಲ. ಇದರಿಂದ ಪೂರ್ಣವಲ್ಲದಿದ್ದರೂ ಸಂಪೂರ್ಣ ಮತ್ತು ಸರಿಯಾದ ಅನಿಸಿಕೆಗಳಿಂದ ನಮ್ಮ ವಿಚಾರವು ಆರಂಭವಾಗಬಹುದು.

ಮೊದಲ ಅಡಚಣೆಯಾದ ನರಮಂಡಲದ ಸಂವೇಗಾತ್ಮಕ ಅಡ್ಡಿಯನ್ನು ನರಮಂಡಲ ವ್ಯೂಹವನ್ನು ಶುದ್ಧಗೊಳಿಸುವ ಮೂಲಕ ತೆಗೆದುಹಾಕಬಹುದು ಎಂದು ಭಾವಿಸಬಹುದು. ಎರಡನೆಯ ಅಡಚಣೆಯೆಂದರೆ, ಅನಿಸಿಕೆಯು ಹುಟ್ಟಿಕೊಳ್ಳುತ್ತಿದ್ದಂತೆಯೇ ಸಂವೇಗಗಳು ಅದನ್ನು ವಿರೂಪಗೊಳಿಸುತ್ತವೆ. ಈ ಕೆಲಸವನ್ನು ಪ್ರೀತಿಯು ಮಾಡಬಹುದು, ದ್ವೇಷವೂ ಮಾಡಬಹುದು, ಯಾವುದೇ ಸಂವೇಗ ಅಥವಾ ಆಸೆ ತನ್ನ ಶಕ್ತಿ ಮತ್ತು ತೀವ್ರತೆಗೆ ಅನುಗುಣವಾಗಿ ಅನಿಸಿಕೆಯು ಪ್ರವಹಿಸಿದಂತೆ ಅದನ್ನು ವಿರೂಪಗೊಳಿಸಬಹುದು. ಸಂವೇಗಗಳನ್ನು ಶಿಸ್ತಿಗೆ ಒಳಪಡಿಸುವ ಮೂಲಕ, ನೈತಿಕ ವರ್ತನೆಗಳನ್ನು ಶುದ್ಧೀಕರಣಗೊಳಿಸುವ ಮೂಲಕ ಮಾತ್ರ ಈ ಸಮಸ್ಯೆಯನ್ನು ನಿವಾರಿಸಬಹುದು. ಇದು ನೈತಿಕ ತರಬೇತಿಯ ಒಂದು ಭಾಗವಾಗಿದ್ದು, ಅದರ ಪರಿಗಣನೆಯನ್ನು ಸದ್ಯಕ್ಕೆ ಮುಂದಕ್ಕೆ ಹಾಕಬಹುದು. ಮುಂದಿನ ಸಮಸ್ಯೆ ಎಂದರೆ, 'ಚಿತ್ತ' ದಲ್ಲಿ ಅಥವಾ ನಿಷ್ಕ್ರಿಯ ನೆನಪಿನಲ್ಲಿ ಈ ಹಿಂದೆ ರೂಪುಗೊಂಡ ಅಥವಾ ಆಳವಾಗಿ ಬೇರೂರಿದ ಅಭ್ಯಾಸಗಳ ಮೂಗು ತೂರಿಸುವಿಕೆ. ವಿಷಯಗಳನ್ನು ನಿರ್ದಿಷ್ಟ ರೀತಿಯಲ್ಲಿ ನೋಡುವ ಅಭ್ಯಾಸ ನಮಗಿರುತ್ತದೆ ಮತ್ತು ನಮ್ಮ ಸ್ವಭಾವದಲ್ಲಿ ರೂಢಿಗತವಾಗಿರುವ ಆಲಸ್ಯವು, ನಾವು ಈಗಾಗಲೇ ಒಗ್ಗಿಕೊಂಡಿರುವ ರೀತಿಯಲ್ಲಿಯೇ ಪ್ರತಿಯೊಂದು ಹೊಸ ಅನುಭವವನ್ನು ರೂಪಿಸುವ ಅಥವಾ ಹೋಲಿಸುವ ಪ್ರವೃತಿಯನ್ನು ಹೊಂದುವAತೆ ಮಾಡುತ್ತದೆ. ಹೆಚ್ಚು ಅಭಿವೃದ್ಧಿ ಹೊಂದಿದ ಮನಸ್ಸುಗಳು ಮಾತ್ರ ಮೊಟ್ಟಮೊದಲ ಅನಿಸಿಕೆಗಳನ್ನು, ಹೊಸ ಅನುಭವದ ನವೀನತೆಯನ್ನು ಸುಪ್ತಾವಸ್ಥೆಯ ಪಕ್ಷಪಾತವಿಲ್ಲದೇ ಗ್ರಹಿಸಬಲ್ಲವು. ಉದಾಹರಣೆಗೆ, ಏನಾಗುತ್ತಿದೆ ಎಂಬುದರ ಬಗ್ಗೆ ನಿಜವಾದ ಅನಿಸಿಕೆ ಇದ್ದರೆ – ನಾವು ಅಭ್ಯಾಸ ಬಲದಿಂದ ಅನಿಸಿಕೆಗಳು ನಿಜವೋ ಸುಳ್ಳೋ ಎಂಬ ಆಧಾರದ ಮೇಲೆ ನಡೆದುಕೊಳ್ಳುತ್ತೇವೆ - ನಾವು ಒಗ್ಗಿಕೊಂಡಿರುವುದಕ್ಕಿಂತ ಅದು ಭಿನ್ನವಾಗಿದ್ದರೆ, ಹಳೆಯ ಮಾನಸಿಕ ಸಂಬಂಧಗಳು (mental associations) 'ಚಿತ್ತ'

ದಲ್ಲಿ ಅದನ್ನು ಸೇರಿ ಬುದ್ಧಿಗೆ ಬದಲಾದ ವರದಿಯನ್ನು ಸಲ್ಲಿಸುತ್ತದೆ. ಅದರಲ್ಲಿ ಒಂದೋ ಹೊಸ ಅನಿಸಿಕೆಯು ಹಳೆಯದರಿಂದ ಆವರಿತವಾಗಿ ಮರೆಸಿಡಲಾಗಿರುತ್ತದೆ ಅಥವಾ ಅದರೊಂದಿಗೆ ಸೇರಿ ಹೋಗಿರುತ್ತದೆ. ಈ ವಿಷಯದಲ್ಲಿ ಇನ್ನೂ ಆಳವಾಗಿ ಹೋಗಬೇಕೆಂದರೆ ಮನಃಶಾಸ್ತ್ರದ ವಿವರಗಳಲ್ಲಿ ಆಳವಾಗಿ ಇಳಿಯಬೇಕಾಗುತ್ತದೆ. ಇಲ್ಲಿ ಈ ವಿಶಿಷ್ಟ ದೃಷ್ಟಾಂತ ಸಾಕೆನಿಸುತ್ತದೆ. 'ಚಿತ್ತ' ದಲ್ಲಿ ರೂಪುಗೊಂಡಿರುವ ಮಾನಸಿಕ ಮತ್ತು ನೈತಿಕ ಅಭ್ಯಾಸಗಳನ್ನು ಶುದ್ಧೀಕರಿಸದ ಹೊರತು, ಅಂದರೆ 'ಚಿತ್ತಶುದ್ಧಿ' ಯಾಗದ ಹೊರತು ಈ ಅಡಚಣೆಯನ್ನು ತೊಡೆದುಹಾಕಲು ಸಾಧ್ಯವಿಲ್ಲ. ಇದು ಯೋಗದ ಪ್ರಾರಂಭಿಕ ಪ್ರಕ್ರಿಯೆ. ನಮ್ಮ ಪ್ರಾಚೀನ ವ್ಯವಸ್ಥೆಯಲ್ಲಿ ಹಲವು ದಾರಿಗಳಿಂದ ಅಂತರ್ಗತ ಮಾಡಿಕೊಳ್ಳಲಾಗಿದ್ದ ಇದಕ್ಕೆ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಸೂಕ್ತ ಸ್ಥಾನವಿಲ್ಲ ಎಂದು ಭಾವಿಸಲಾಗುತ್ತದೆ.

ಆದ್ದರಿಂದ, ನಮ್ಮ ಹಳೆಯ ಭಾರತೀಯ ವ್ಯವಸ್ಥೆಗೆ, ಅದರ ಕೆಲವು ತತ್ವಗಳಿಗೆ ಮರಳಿ ಹೋಗದಿದ್ದರೆ, ಈ ಅಡಚಣೆಯ ಮೂಲವು ಹಾಗೆಯೇ ಉಳಿದುಕೊಳ್ಳುವುದಕ್ಕೆ ಆಸ್ಪದ ನೀಡುವಲ್ಲಿ ತೃಪ್ತರಾಗಿರಬೇಕಾಗುತ್ತದೆ ಎಂಬುದು ಸುಸ್ಪಷ್ಟ. ಬಹು ಮಹತ್ವದ ಈ ವಿಷಯದಲ್ಲಿ ಒಂದು ನಿಜವಾದ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯು ಯುರೋಪಿನ ವಿಚಾರಗಳ ನಿಯಂತ್ರಣಕ್ಕೆ ಒಳಪಡಲು ಅವಕಾಶ ನೀಡುವುದಿಲ್ಲ. ನಮ್ಮ ವ್ಯವಸ್ಥೆಯ ಭಾಗವಾಗಿ ಇದನ್ನು ಸುಲಭವಾಗಿ ಮಾಡಬಲ್ಲ ತುಂಬ ಸರಳವಾದ ಮತ್ತು ಮಹತ್ವಪೂರ್ಣವಾದ ಪ್ರಕ್ರಿಯೆಯೊಂದು ಇದೆ.

ನಮ್ಮ ಇಚ್ಛೆ ಹಾಗೂ ನಿಯಂತ್ರಣಕ್ಕೆ ಒಳಪಡದ ನಿಷ್ಕ್ರಿಯ ನೆನಪಿನ ಭಂಡಾರದಿಂದ ತನ್ನದೇ ಆದ ಆವೇಗದಿಂದ ಹುಟ್ಟಿಕೊಳ್ಳುವ ವಿಚಾರ, ಸಂವೇದನೆಗಳ ಪ್ರಕ್ಷುಬ್ಧ ಪ್ರವಾಹವನ್ನು ನಿಷ್ಕ್ರಿಯಗೊಳಿಸುವುದನ್ನು ಒಳಗೊಂಡಿದೆ. ಈ `ನಿಷ್ಕ್ರಿಯತೆಯು' ಬುದ್ಧಿಯನ್ನು ಹಳೆಯ ಮಾನಸಿಕ ಸಂಬಂಧಗಳಿಂದ ಮತ್ತು ತಪ್ಪು ಅನಿಸಿಕೆಗಳಿಂದ ಬಿಡುಗಡೆಗೊಳಿಸುತ್ತದೆ. ನಿಷ್ಕ್ರಿಯ ನೆನಪಿನ ಭಂಡಾರದಿಂದ ಏನು ಅಗತ್ಯವಿದೆಯೋ ಅದನ್ನು ಮಾತ್ರ ಆಯ್ದುಕೊಳ್ಳಲು ಶಕ್ತಿ ನೀಡುತ್ತದೆ. ಇದು ಸಹಜವಾಗಿಯೇ ಸರಿಯಾದ ಅನಿಸಿಕೆಗಳನ್ನು ಪಡೆಯುವಂತೆ ಅಭ್ಯಾಸ ಮಾಡಿಸುತ್ತದೆ. ಜೊತೆಗೆ ಯಾವ ರೀತಿಯ 'ಸಂಸ್ಕಾರಗಳು' ಅಥವಾ ಮಾನಸಿಕ ಸಂಬಂಧಗಳನ್ನು ರೂಪಿಸಿಕೊಳ್ಳಬೇಕು ಅಥವಾ ತಿರಸ್ಕರಿಸಬೇಕು ಎಂಬುದರ ಬಗ್ಗೆ 'ಚಿತ್ತ'ವನ್ನು ನಿಯಂತ್ರಿಸಲು ಬುದ್ಧಿಗೆ ಅನುವು ಮಾಡಿಕೊಡುತ್ತದೆ. ವಿವೇಚಿಸುವುದು, ಆಯ್ಕೆ ಮಾಡುವುದು, ವ್ಯವಸ್ಥೆಗೊಳಿಸುವುದು - ಇದು ಬುದ್ಧಿಯ ನಿಜವಾದ ಕಾರ್ಯ ಕ್ಷೇತ್ರ. ಆದರೆ, ಎಲ್ಲಿಯವರೆಗೆ 'ಚಿತ್ತ ಶುದ್ಧಿ' ಇರುವುದಿಲ್ಲವೋ ಅಲ್ಲಿಯವರೆಗೆ, ಈ ಕಾರ್ಯವನ್ನು ಪರಿಪೂರ್ಣವಾಗಿ ಮಾಡುವ ಬದಲು, ತಾನೇ ಅಪರಿಪೂರ್ಣವಾಗಿ, ಭ್ರಷ್ಟವಾಗಿ ಉಳಿದು, ತಪ್ಪು ವಿವೇಚನೆ, ತಪ್ಪು ಕಲ್ಪನೆ, ತಪ್ಪು ಸ್ಮರಣೆ, ತಪ್ಪು ಪರಿವೀಕ್ಷಣೆ, ತಪ್ಪು ಹೋಲಿಕೆ, ತಪ್ಪು ವೈರುದ್ಧ್ಯ ಮತ್ತು ಸಾಮ್ಯತೆಗಳು, ತಪ್ಪು ತರ್ಕೈಸುವಿಕೆ (deduction), ತಪ್ಪು ಅನುಗಮನದ ತಾರ್ಕಿಕತೆ (inductive reasoning) ಮತ್ತು ತಪ್ಪು ತೀರ್ಮಾನಕ್ಕೆ ಬರುವುದರಿಂದಾಗಿ (inference) ಮನಸ್ಸಿನ ಕಾಲುವೆಯಲ್ಲಿ ಗೊಂದಲ ಏರ್ಪಡಿಸುತ್ತದೆ. ಬುದ್ಧಿಯ ಸ್ವಾತಂತ್ರ್ಯ, ಶುದ್ಧೀಕರಣ ಮತ್ತು ಪರಿಪೂರ್ಣ ಕ್ರಿಯೆಗೆ 'ಚಿತ್ತ' ಶುದ್ಧಿ ಅತ್ಯಂತ ಅವಶ್ಯ.

# VI

# ಅಭ್ಯಾಸದಿಂದ ಇಂದ್ರಿಯ ಸುಧಾರಣೆ

ಜ್ಞಾನದ ಸಂಗ್ರಾಹಕಗಳಾಗಿ ಇಂದ್ರಿಯಗಳ ಅಸಮರ್ಥತೆಗೆ ಇರುವ ಇನ್ನೊಂದು ಕಾರಣವೆಂದರೆ ಅವುಗಳ ಉಪಯೋಗವನ್ನು ಸಂಪೂರ್ಣವಾಗಿ ಮಾಡದಿರುವುದು. ನಾವು ನೋಟ, ಶಬ್ದ, ವಾಸನೆ, ಸ್ಪರ್ಶ ಅಥವಾ ರುಚಿಯನ್ನು ಸಾಕಷ್ಟು ಗಮನಿಸುವುದಿಲ್ಲ ಅಥವಾ ಸಾಕಷ್ಟು ಗಮನಕೊಟ್ಟು ಹತ್ತಿರದಿಂದ ಸಂಪೂರ್ಣವಾಗಿ ಪರಿವೀಕ್ಷಿಸದೇ ಇರುವುದರಿಂದ ಅವುಗಳು ತಮ್ಮ ಕಡೆಗೆ ಗಮನ ಸೆಳೆಯುವ ಪ್ರಯತ್ನವೆಲ್ಲವೂ ನಿರರ್ಥಕವಾಗುತ್ತದೆ. ಸ್ವೀಕರಿಸುವ ಸಾಧನಗಳ ಈ ತಾಮಸಿಕ ಜಡತ್ವವು 'ಬುದ್ಧಿಯ' ಅಲಕ್ಷ್ಯದಿಂದ ಆಗುವಂಥದು ಎಂಬುದರಲ್ಲಿ ಅನುಮಾನವಿಲ್ಲ. ಆದುದರಿಂದ ಬುದ್ಧಿಶಕ್ತಿಯ ಕಾರ್ಯಗಳ ತರಬೇತಿಯಡಿಯಲ್ಲಿ ಈ ಕುರಿತು ಪರ್ಯಾಲೋಚಿಸುವುದು ಸೂಕ್ತ ಎನಿಸುತ್ತದೆ. ಮನಃಶಾಸ್ತ್ರೀಯವಾಗಿ ಸರಿಯಿಲ್ಲವೆಂದು ಅನಿಸಿದರೂ, ಇದನ್ನು ಇಲ್ಲಿಯೇ ಗಮನಿಸುವುದು ಹೆಚ್ಚು ಅನುಕೂಲಕರ ಎಂದು ತೋರುತ್ತದೆ. ವಿದ್ಯಾರ್ಥಿಯು ತನ್ನ ಸುತ್ತಲಿನ ದೃಶ್ಯಗಳು, ಶಬ್ದಗಳು ಮುಂತಾದವುಗಳನ್ನು ಗ್ರಹಿಸಲು, ವ್ಯತ್ಯಾಸವನ್ನು ಕಾಣಲು, ಅವುಗಳ ಸ್ವಭಾವ, ಗುಣ, ಮೂಲಗಳನ್ನು ಗುರುತಿಸಲು ಮತ್ತು ಅದನ್ನೆಲ್ಲ 'ಚಿತ್ತ'ದಲ್ಲಿ ನೆಲೆಗೊಳಿಸಿಕೊಳ್ಳಲು ಅಭ್ಯಾಸ ಮಾಡಿಕೊಂಡಿರಬೇಕಾಗುತ್ತದೆ. ಏಕೆಂದರೆ, ಮನಸ್ಸು ಹಿಂದಿನದನ್ನು ನೆನಪು ಮಾಡಿಕೊಳ್ಳಬೇಕೆಂದಾಗಲೆಲ್ಲ ಸ್ಪಂದಿಸಲು ಅವು ಸದಾ ಸಿದ್ಧವಾಗಿರಲು ಇದರಿಂದ ಸಾಧ್ಯವಾಗುತ್ತದೆ.

ಮನುಷ್ಯರಲ್ಲಿ ಪರಿವೀಕ್ಷಣಾ ಸಾಮರ್ಥ್ಯವು, ಇಂದ್ರಿಯಗಳು ಮತ್ತು ನೆನಪಿನ ಉಪಯೋಗದಲ್ಲಿನ ನಿರ್ಲಕ್ಷ್ಯದಿಂದಾಗಿ ತುಂಬ ಅಪರಿಪೂರ್ಣವಾಗಿ ಬೆಳವಣಿಗೆ ಹೊಂದಿರುವುದು ಸೂಕ್ಷ್ಮ ಪ್ರಯೋಗಗಳಿಂದ ಸಾಬೀತಾಗಿರುವ ನಿಜ ಸಂಗತಿ. ಹನ್ನೆರಡು ಜನರಿಗೆ ಒಂದು ಸವಾಲು ನೀಡಿ – ಎರಡು ಗಂಟೆಗಳ ಹಿಂದೆ ತಾವೆಲ್ಲರೂ ನೋಡಿದ್ದನ್ನು ದಾಖಲಿಸಲು ಕೇಳಿ. ಅವರೆಲ್ಲರ ದಾಖಲೆಗಳು ಒಬ್ಬರಿಂದ ಒಬ್ಬರಿಗೆ ಭಿನ್ನವಾಗಿರುತ್ತವೆ, ಅಷ್ಟೇ ಅಲ್ಲ ವಾಸ್ತವವಾಗಿ ಸಂಭವಿಸಿರುವುದರಿಂದ ಕೂಡ ಭಿನ್ನವಾಗಿರುತ್ತವೆ. ಈ ಅಪೂರ್ಣತೆಯನ್ನು ತೊಡೆದುಹಾಕುವುದರಲ್ಲಿ ಯಶಸ್ವಿಯಾದರೆ ಅದು ದೋಷವನ್ನು ತೆಗೆಯಲು ಬಹಳಷ್ಟು ಸಹಾಯವಾಗುತ್ತದೆ. ಇಂದ್ರಿಯಗಳಿಗೆ ತಮ್ಮ ಕೆಲಸಗಳನ್ನು ಪರಿಪೂರ್ಣವಾಗಿ ಮಾಡಲು ತರಬೇತಿ ನೀಡಬಹುದಾದರೆ ಅವು ತಮ್ಮ ಕಾರ್ಯವು 'ಬುದ್ಧಿಗೆ' ಅಗತ್ಯವಿದೆ ಎಂಬುದನ್ನು ಅರಿತು ಅದನ್ನು ಸಾಕಷ್ಟು ಸುಲಭವಾಗಿ ಮಾಡುವುದರಿಂದ, ಮತ್ತು ವಾಸ್ತವಾಂಶಗಳನ್ನು ನೆನಪಿನಲ್ಲಿ ಅವುಗಳ ಸರಿಯಾದ ಸ್ಥಾನ ಮತ್ತು ಕ್ರಮದಲ್ಲಿ ಇಡಲು ಸಾಕಷ್ಟು ಗಮನ ಕೊಡುವುದರ ಮೂಲಕ ಇದು ಸಾಧ್ಯವಾಗುತ್ತದೆ.

'ಗಮನ ನೀಡುವುದು' ಜ್ಞಾನದ ಒಂದು ಪ್ರಧಾನ ಅಂಶ. ಇದರ ಮಹತ್ವವನ್ನು ಯಾವಾಗಲೂ ಗುರುತಿಸಲಾಗಿದೆ. `ಗಮನ ನೀಡುವುದು' ಸರಿಯಾದ ನೆನಪು ಮತ್ತು ನಿಖರತೆಯ ಮೊಟ್ಟ ಮೊದಲ ಪೂರ್ವಾಪೇಕ್ಷಿತ. ವಿದ್ಯಾರ್ಥಿಯು ಗಳಿಸಬೇಕಾದ ಶಿಸ್ತಿನ ಮೊದಲ ಅಂಶವೆಂದರೆ ತಾನು ಮಾಡುತ್ತಿರುವುದಕ್ಕೆ ಗಮನ ನೀಡುವುದು, ಮತ್ತು, ನಾನು ಈಗಾಗಲೇ ಸಲಹೆ ನೀಡಿರುವಂತೆ, ಗಮನ ನೀಡಬೇಕಾದ ವಿಷಯ ಅಥವಾ ವಸ್ತುವನ್ನು ಆಸಕ್ತಿದಾಯಕವನ್ನಾಗಿ ಮಾಡಿದರೆ ಇದನ್ನು ಸುಲಭವಾಗಿ ಸಾಧಿಸಬಹುದು. ಒಂದೇ ವಸ್ತು-

ವಿಷಯಕ್ಕೆ ಗಮನ ನೀಡುವುದನ್ನು ಏಕಾಗ್ರತೆ ಎಂದು ಕರೆಯಲಾಗುತ್ತದೆ. ಆದಾಗ್ಯೂ, ಏಕಕಾಲಕ್ಕೆ ಹಲವು ಸಂಗತಿಗಳ ಮೇಲೆ ಏಕಾಗ್ರವಾಗಿರುವುದು ಅನಿವಾರ್ಯ ಎಂಬ ಸತ್ಯವನ್ನು ಕೆಲವೊಮ್ಮೆ ಕಡೆಗಣಿಸಲಾಗಿದೆ ಎಂಬುದು ನಿಜ. ಸಾಮಾನ್ಯವಾಗಿ ಜನರು ಏಕಾಗ್ರತೆಯ ಕುರಿತು ಮಾತನಾಡಿದರೆ ಒಂದು ಸಮಯಕ್ಕೆ ಒಂದು ವಿಷಯ-ವಸ್ತುವಿನ ಮೇಲೆ ಏಕಾಗ್ರವಾಗಿ ಇರಬೇಕು ಎಂಬುದೇ ಅದರ ಸೂಚ್ಯಾರ್ಥ; ಆದರೆ ಏಕಾಗ್ರತೆಯ ಶಕ್ತಿಯನ್ನು ಇಮ್ಮಡಿಗೊಳಿಸಲು, ಮುಮ್ಮಡಿಗೊಳಿಸಿಕೊಳ್ಳಲು, ಬಹುಪಟ್ಟು ಹೆಚ್ಚಿಸಲು ಸಾಧ್ಯವಿದೆ. ಒಂದು ನಿರ್ದಿಷ್ಟ ಘಟನೆ ನಡೆಯುತ್ತಿರುವಾಗ, ಅದು ಹಲವು ಏಕಕಾಲಿಕ ಘಟನೆಗಳ ಅಥವಾ ಏಕಕಾಲಿಕ ಸನ್ನಿವೇಶಗಳ ಒಂದು ಸಮುಚ್ಚಯದ್ದಾಗಿದ್ದಿರಬಹುದು – ಒಂದು ನೋಟ, ಒಂದು ಶಬ್ದ, ಒಂದು ಸ್ಪರ್ಶ ಅಥವಾ ಹಲವು ನೋಟಗಳು, ಶಬ್ದಗಳು, ಸ್ಪರ್ಶಗಳು ಒಂದೇ ಕ್ಷಣದಲ್ಲಿ ಸಂಭವಿಸುತ್ತಿರಬಹುದು ಅಥವಾ ಅಲ್ಪ ಅವಧಿಯ ಒಂದೇ ಸಮಯದಲ್ಲಿ ನಡೆಯುತ್ತಿರಬಹುದು. ಒಂದನ್ನು ಗಮನಿಸಿ ಉಳಿದವನ್ನು ಅಸ್ಪಷ್ಟವಾಗಿ ಗುರುತಿಸುವುದು, ಹಲವನ್ನು ಗಮನಿಸುವುದೇ ಇಲ್ಲ ಅಥವಾ ಎಲ್ಲವನ್ನು ಗಮನಿಸಬೇಕೆಂದು ಒತ್ತಾಯ ಮಾಡಿದರೆ ಗಮನ ಭಂಗವಾಗಿ ಯಾವುದನ್ನೂ ಸರಿಯಾಗಿ ಗಮನಿಸದೇ ಇರುವುದು ಮನಸ್ಸಿನ ಪ್ರವೃತ್ತಿಯಾಗಿದೆ. ಆದಾಗ್ಯೂ, ಸಮುಚ್ಚಯದಲ್ಲಿ ಪ್ರತಿಯೊಂದನ್ನೂ ಪರಿಪೂರ್ಣವಾಗಿ ಗಮನಿಸುವಂತೆ ಮತ್ತು ನೆನಪಿಡುವಂತೆ ಸನ್ನಿವೇಶಗಳ ಸಮುಚ್ಚಯದ ಮೇಲೆ ಸಮಾನವಾಗಿ ಗಮನ ಕೊಡುವುದನ್ನು ಬೆಳೆಸಿ ಪರಿಹರಿಸಬಹುದು. ಇದು ಕೇವಲ 'ಅಭ್ಯಾಸ' ಅಥವಾ ದೃಢ ಮತ್ತು ಸಹಜವಾಗಿ ಅಭ್ಯಾಸ ಮಾಡಿಕೊಳ್ಳಬೇಕಿರುವ ವಿಷಯ.

ಕಣ್ಣು ಅಸಂಖ್ಯ ವಿಷಯ ಅಥವಾ ವಸ್ತುಗಳೊಂದಿಗೆ ಕಾರ್ಯಪ್ರವೃತ್ತವಾಗಿರುವಾಗ ಅದರ ಚಟುವಟಿಕೆಯ ನಿಖರತೆಯನ್ನು ಖಚಿತಪಡಿಸಿಕೊಳ್ಳಲು ಹಸ್ತವು ಸಹಾಯಕ್ಕೆ ಬರಲು ಸಮರ್ಥವಾಗಿರುವುದು ಹೆಚ್ಚು ಅಪೇಕ್ಷಣೀಯವಾದುದು. ಇದರ ಪ್ರಯೋಜನಗಳು ಎಷ್ಟು ಸುಸ್ಪಷ್ಟ ಮತ್ತು ಅತ್ಯಗತ್ಯವೆಂದರೆ ಈ ಕುರಿತು ದೀರ್ಘವಾಗಿ ಯೋಚಿಸಬೇಕಿಲ್ಲ. ಕಣ್ಣು ನೋಡಿದ ಸಂಗತಿಯನ್ನು ಕೈಯು ಅನುಕರಿಸುವ ಅಭ್ಯಾಸವು ಇಂದ್ರಿಯಕ್ಕೆ ಒದಗಿದ ವಸ್ತುಗಳನ್ನು ಗಮನಿಸುವಲ್ಲಿ ಇರುವ ಮನಸ್ಸಿನ ಕೊರತೆಗಳನ್ನು ಮತ್ತು ತಪ್ಪುಗಳನ್ನು ಪತ್ತೆಹಚ್ಚಲು ಹಾಗೂ ನೋಡಿದ್ದನ್ನು ನಿಖರವಾಗಿ ದಾಖಲಿಸಲು, ಈ ಎರಡರಲ್ಲಿಯೂ ಸಹಾಯವಾಗುತ್ತದೆ. ಕೈಯಿಂದ ಮಾಡುವ ಅನುಕರಣೆಯು ಪರಿವೀಕ್ಷಣೆಯ ನಿಖರತೆಯನ್ನು ಖಾತ್ರಿಪಡಿಸುತ್ತದೆ. ಇದು ಚಿತ್ರಕಲೆಯ ಮೊದಲ ಉಪಯೋಗಗಳಲ್ಲಿ ಒಂದು ಮತ್ತು ಅಂಗಗಳ ತರಬೇತಿಯಲ್ಲಿ ಇದನ್ನು ಅತ್ಯಗತ್ಯ ಭಾಗವನ್ನಾಗಿ ಮಾಡಲು ಇದೊಂದು ಕಾರಣ ಸಾಕು.

# VII

# ಮನಸ್ಸಿನ ಸಾಮರ್ಥ್ಯಗಳ ತರಬೇತಿ

ಅಭಿವೃದ್ಧಿಪಡಿಸಬೇಕಾಗಿರುವ ಮನಸ್ಸಿನ ಮೊಟ್ಟಮೊದಲ ಗುಣಗಳು ಎಂದರೆ ಪರಿವೀಕ್ಷಣೆ ಎಂಬುದರ ಅಡಿಯಲ್ಲಿ ವರ್ಗೀಕರಣ ಮಾಡಬಹುದಾದಂಥವು. ನಾವು ಕೆಲವೊಂದಷ್ಟನ್ನು ಗಮನಿಸುತ್ತೇವೆ, ಕೆಲವನ್ನು ಅಲಕ್ಷಿಸುತ್ತೇವೆ; ಗಮನಿಸಿದ್ದನ್ನೂ ಕೂಡ ಬಹಳ ಕಡಮೆ ಮಾತ್ರ ಗ್ರಹಿಸಿರುತ್ತೇವೆ. ನಾವು ಸಾಧಾರಣವಾಗಿ ವಸ್ತುವೊಂದರ ಆತುರದ ಅರೆ-ಗಮನದ ನೋಟದಿಂದ ಮೂಡಿದ ಸಾಮಾನ್ಯ ಗ್ರಹಿಕೆಯನ್ನು ಮಾತ್ರ ಉಳಿಸಿಕೊಳ್ಳುತ್ತೇವೆ. ವಸ್ತುವೊಂದನ್ನು ಹತ್ತಿರದಿಂದ ಗಮನಿಸುವುದು ಅದರ ಸ್ಥಾನ, ರೂಪ, ಸ್ವಭಾವವನ್ನು ಅದರ ಸುತ್ತಮುತ್ತಲಿನವುಗಳಿಂದ ಪ್ರತ್ಯೇಕವಾಗಿ ಗೊತ್ತುಮಾಡುತ್ತದೆ. ಪರಿವೀಕ್ಷಣಾ ಸಾಮರ್ಥ್ಯದ ಸಂಪೂರ್ಣ ಏಕಾಗ್ರತೆಯು ಮೂರು ಮುಖ್ಯ ಇಂದ್ರಿಯಗಳು ಆ ವಸ್ತುವಿನ ಬಗೆಗೆ ಕೊಡಬಲ್ಲ ಎಲ್ಲ ಜ್ಞಾನವನ್ನೂ ನಮಗೆ ಕೊಡುತ್ತದೆ, ಅಥವಾ ವಸ್ತುವನ್ನು ಸ್ಪರ್ಶಿಸಿದರೆ ಅಥವಾ ಅದರ ರುಚಿ ನೋಡಿದರೆ, ಆ ವಸ್ತುವಿನ ಸ್ವಭಾವ ಮತ್ತು ಗುಣಗಳ ಬಗೆಗೆ ಐದು ಇಂದ್ರಿಯಗಳು ಕೊಡುವ ಜ್ಞಾನವನ್ನೆಲ್ಲ ನಾವು ಕಲೆಹಾಕಬಹುದು. ಅತೀಂದ್ರಿಯ ಜ್ಞಾನವನ್ನು ಬಳಸುವಂಥ ಕವಿ, ವರ್ಣಚಿತ್ರಕಾರ, ಯೋಗಿಯು ಸಾಮಾನ್ಯ ವೀಕ್ಷಕನಿಗೆ ಕಾಣದ ಇನ್ನೂ ಹೆಚ್ಚಿನದನ್ನು ಗ್ರಹಿಸಬಲ್ಲರು. ವಿಜ್ಞಾನಿಯು ಅತೀಸೂಕ್ಷ್ಮ ಪರಿವೀಕ್ಷಣೆಗೆ ತೆರೆದುಕೊಳ್ಳಬಲ್ಲ ಸತ್ಯಸಂಗತಿಗಳನ್ನು ಸಂಶೋಧನೆಯಿಂದ ಕಂಡುಕೊಳ್ಳುತ್ತಾನೆ. ಇವು ಪರಿವೀಕ್ಷಣಾ ಸಾಮರ್ಥ್ಯದ ಅಂತರ್ಗತ ಘಟಕಗಳು ಮತ್ತು ಇದರ ಮೂಲ ಆಧಾರ ನಿಕಟವಾದ ಅಥವಾ ನಿಕಟ ಮತ್ತು ಸೂಕ್ಷ್ಮವಾದ ಗಮನಿಸುವಿಕೆಯೇ ಎಂಬುದು ಸುಸ್ಪಷ್ಟ. ಗಮವನ್ನು ಏಕಾಗ್ರಗೊಳಿಸುವ ಮತ್ತು ಸಾತ್ವಿಕ ಗ್ರಹಿಕೆಯ ಅಭ್ಯಾಸ ನಮಗಿದ್ದರೆ ನಾವು ವಸ್ತುವಿನೆಡೆಗೆ ಸುಮ್ಮನೇ ಕಣ್ಣು ಹಾಯಿಸಿದರೂ ಸಾಕು ಅದರ ಬಗ್ಗೆ ಹೆಚ್ಚಿನದನ್ನು ಸಂಗ್ರಹಿಸಬಹುದು. ಶಿಕ್ಷಕನು ಮಾಡಬೇಕಾದ ಮೊಟ್ಟಮೊದಲ ಕೆಲಸವೆಂದರೆ ವಿದ್ಯಾರ್ಥಿಗೆ ಅವನ/ಅವಳ ಗಮನವನ್ನು ಕೇಂದ್ರೀಕರಿಸಲು ಅಭ್ಯಾಸಮಾಡಿಸಬೇಕು.

ನಾವು ಹೂವಿನ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ವಿದ್ಯಾರ್ಥಿಯು ಅನುದ್ದೇಶಿತವಾಗಿ ಸುಮ್ಮನೇ ಹೂವಿನತ್ತ ಕಣ್ಣುಹಾಯಿಸಿ, ಅದರ ವಾಸನೆ, ರೂಪ ಮತ್ತು ಬಣ್ಣಗಳ ಕುರಿತು ಸಾಧಾರಣ ಚಿತ್ರ ಮೂಡಿಸಿಕೊಳ್ಳುವ ಬದಲು, ಆ ಹೂವನ್ನು ಅರ್ಥಮಾಡಿಕೊಳ್ಳಲು – ಅದರ ಖಚಿತ ಬಣ್ಣ-ಛಾಯೆ, ಅದರದೇ ವಿಶೇಷ ಹೊಳಪು, ಅದರ ಸುಗಂಧದ ಸಾಂದ್ರತೆ, ಬಾಗುವಿಕೆಯ ಸೌಂದರ್ಯ ಮತ್ತು ರೂಪ ವಿನ್ಯಾಸ ಎಲ್ಲವನ್ನೂ ಅರಿಯಲು ಆತನನ್ನು ಪ್ರೋತ್ಸಾಹಿಸಬೇಕು. ಆತನ ಸ್ಪರ್ಶವೇ ಸ್ವತಃ ಹೂವಿನ ಮೇಲ್ಮೆöÉಯ ರಚನೆ ವಿನ್ಯಾಸ ಮತ್ತು ಗುಣವಿಶೇಷಗಳ ಬಗ್ಗೆ ದೃಢಪಡಿಸಬೇಕು. ಅನಂತರ ಹೂವನ್ನು ಎಳೆಎಳೆಯಾಗಿ ಬಿಡಿಸಿ ಅದರ ರಚನೆಯನ್ನು ವೀಕ್ಷಣೆಯ ಅದೇ ಕಾಳಜಿಯಿಂದ ಪರಿಶೀಲಿಸಬೇಕು. ಇದೆಲ್ಲವನ್ನೂ ಒಂದು ಕೆಲಸವೆಂಬಂತೆ ಮಾಡಬಾರದು. ಬದಲಿಗೆ ವಿದ್ಯಾರ್ಥಿಯು ತನಗರಿವಿಲ್ಲದೆಯೇ ಇಡೀ ವಿಷಯವನ್ನು ಕರಗತ ಮಾಡಿಕೊಳ್ಳುವ ತನಕ ಒಂದಾದ ನಂತರ ಒಂದನ್ನು ತಾನೇ ಗಮನಿಸಲು ಮತ್ತು ಶೋಧಿಸಲು ಪ್ರೇರೇಪಿಸುವಂಥ, ಆತನಿಗೆ ಸೂಕ್ತವೆನಿಸುವ ರೀತಿಯಲ್ಲಿ ಕೌಶಲಪೂರ್ಣವಾಗಿ ಸಿದ್ಧಪಡಿಸಿದ ಪ್ರಶ್ನೆಗಳಾಗಿ ರೂಪಿಸುವುದರ ಮೂಲಕ ಆಸಕ್ತಿದಾಯಕ ವಿಷಯವನ್ನಾಗಿ ಮಾಡಬೇಕು.

ಮುಂದೆ ಗಮನಿಸಬೇಕಾದ ಗುಣಗಳು ಸ್ಮರಣೆ ಮತ್ತು ವಿವೇಚನೆ. ಇವುಗಳನ್ನು ಕೂಡ ಅದೇ ರೀತಿಯಲ್ಲಿ ಅಪ್ರಜ್ಞಾಪೂರ್ವಕವಾಗಿ ಪ್ರೋತ್ಸಾಹಿಸಬೇಕು. ಪಾಠವೊಂದನ್ನು ನೆನಪಿಟ್ಟುಕೊಳ್ಳಲು ಅದೇ ಪಾಠವನ್ನು ವಿದ್ಯಾರ್ಥಿಯು ಮತ್ತೆಮತ್ತೆ ಪುನರಾವರ್ತಿಸುವಂತೆ ಮಾಡಬಾರದು. ಅದು ನೆನಪಿನ ಶಕ್ತಿಯನ್ನು ತರಬೇತುಗೊಳಿಸುವ ಯಾಂತ್ರಿಕ, ಭಾರದ

ಮತ್ತು ದಡ್ಡತನದ ದಾರಿ. ಅದೇ ರೀತಿಯ ಆದರೆ ಬೇರೆಯ ಹೂವನ್ನು ಆತನ ಕೈಯಲ್ಲಿಟ್ಟು, ಅದೇ ಬಗೆಯ ಎಚ್ಚರ ಕಾಳಜಿಯಿಂದ ಆದರೆ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತುಮಾಡಿಕೊಳ್ಳುವ ಸ್ಪಷ್ಟ ಉದ್ದೇಶದಿಂದ ಗಮನಿಸುವುದನ್ನು ಪ್ರೋತ್ಸಾಹಿಸಬೇಕು. ಈ ರೀತಿ ದಿನವೂ ಮಾಡುವ ಮೂಲಕ ನೆನಪಿನ ಶಕ್ತಿಯು ಸಹಜವಾಗಿ ತರಬೇತುಗೊಳ್ಳುತ್ತದೆ. ಇಷ್ಟು ಮಾತ್ರವಲ್ಲ, ಹೋಲಿಕೆ ಮತ್ತು ವ್ಯತ್ಯಾಸಗಳ ಮಾನಸಿಕ ಕೇಂದ್ರಗಳೂ ಅಭಿವೃದ್ಧಿ ಹೊಂದುವುವು. ವಿದ್ಯಾರ್ಥಿಯು ವಸ್ತುಗಳಲ್ಲಿನ ಸಾಮ್ಯತೆಗಳು ಮತ್ತು ವ್ಯತ್ಯಾಸಗಳನ್ನು ಗಮನಿಸುವುದನ್ನು ಒಂದು ಅಭ್ಯಾಸವೆಂಬಂತೆ ಮಾಡಲು ಆರಂಭಿಸುತ್ತಾನೆ. ಶಿಕ್ಷಕನು ಈ ಸಾಮರ್ಥ್ಯ ಮತ್ತು ಅಭ್ಯಾಸದ ಬೆಳವಣಿಗೆಯನ್ನು ಪ್ರೋತ್ಸಾಹಿಸಲು ಎಲ್ಲ ಬಗೆಯ ಕಾಳಜಿ ವಹಿಸಬೇಕು. ಅದೇ ವೇಳೆ ಜಾತಿಗಳು ಮತ್ತು ಕುಲಗಳ (species and genus) ನಿಯಮಗಳು ಮನಸ್ಸಿನಲ್ಲಿ ಗೋಚರಿಸಲಾರಂಭಿಸುತ್ತವೆ. ಬೆಳೆಯುತ್ತಿರುವ ಎಳೆಯ ಮನಸ್ಸಿನ ಮೇಲೆ ಲಕ್ಷ್ಯವಿಡುವ ಮತ್ತು ಮುನ್ನಡೆಸುವ ಮೂಲಕ ವೈಜ್ಞಾನಿಕ ರೀತಿಯಲ್ಲಿ ಆಲೋಚಿಸುವ ಅಭ್ಯಾಸ, ವೈಜ್ಞಾನಿಕ ದೃಷ್ಟಿಕೋನ ಮತ್ತು ವೈಜ್ಞಾನಿಕ ಜ್ಞಾನದ ಮೂಲಭೂತ ವಾಸ್ತವಾಂಶಗಳನ್ನು ಅತ್ಯಂತ ಕಡಮೆ ಅವಧಿಯಲ್ಲಿ ಅದರ ಶಾಶ್ವತ ಸಾಧನದ ಭಾಗವಾಗಿ ಮಾಡಬಹುದು. ಅನಾರೋಗ್ಯಕರ ಅಭ್ಯಾಸಗಳಿಂದ ಹಾಳಾಗದ, ಆರೋಗ್ಯವಂತ ಮತ್ತು ಸಹಜವಾದ ನಡೆಗಳಿಂದ ಶುದ್ಧವಾದ ಮನಸ್ಸಿಗೆ ಹೇವರಿಕೆ ತರಿಸುವ ಮತ್ತು ಬಾಯಿಪಾಠ ಅಭ್ಯಾಸದ ಆರಂಭವೆಂದು ಎನ್ನಲಾಗುವ ಕೇವಲ ಹೂವು, ಎಲೆ, ಸಸ್ಯ, ಮರಗಳ ಹೆಸರು ಮತ್ತು ಒಣ ಮಾಹಿತಿಗಳನ್ನು ಗಳಿಸುವ ಹೊರೆಯನ್ನು ಹೇರುವ ಬದಲು ಅವುಗಳನ್ನು ಗಮನಿಸಿ ಹೋಲಿಸಲು ಕಲಿಸಿದರೆ, ಆಗ, ಸಸ್ಯಶಾಸ್ತ್ರೀಯ ಜ್ಞಾನದ ಅಡಿಪಾಯಗಳನ್ನು ಹಾಕುತ್ತೇವೆ. ಇದೇ ರೀತಿಯಲ್ಲಿ ತಾರೆಗಳ ಪರಿವೀಕ್ಷಣೆಯಿಂದ ಖಗೋಳವಿಜ್ಞಾನ, ಭೂಮಿ, ಶಿಲೆಗಳು ಮುಂತಾದವುಗಳ ಪರಿವೀಕ್ಷಣೆಯಿಂದ ಭೂವಿಜ್ಞಾನ, ಕೀಟಗಳು ಮತ್ತು ಪ್ರಾಣಿಗಳ ಪರಿವೀಕ್ಷಣೆಯಿಂದ ಕೀಟಶಾಸ್ತ್ರ ಮತ್ತು ಜೀವವಿಜ್ಞಾನದ ಅಡಿಪಾಯಗಳನ್ನು ಹಾಕಬಹುದು. ಔಪಚಾರಿಕ ಬೋಧನೆ ಅಥವಾ ಸೂತ್ರಗಳು ಮತ್ತು ಪುಸ್ತಕೀಯಜ್ಞಾನವನ್ನು ಮನಸ್ಸಿನ ಮೇಲೆ ಹೇರದೆ, ಆಸಕ್ತಿದಾಯಕ ಪ್ರಯೋಗಗಳ ಪರಿವೀಕ್ಷಣೆಯಿಂದ ರಸಾಯನಶಾಸ್ತ್ರವನ್ನು ಸ್ವಲ್ಪ ಕಾಲದ ಬಳಿಕ ಆರಂಭಿಸಬಹುದು. ವಸ್ತುಗಳ ವಿವಿಧ ವರ್ಗಗಳನ್ನು ಪರಿವೀಕ್ಷಿಸುವ, ಹೋಲಿಸುವ, ನೆನಪಿಡುವ ಮತ್ತು ವಿವೇಚಿಸುವ ಸಾಮರ್ಥ್ಯಗಳನ್ನು ಆರಂಭಿಕ ಬಾಲ್ಯದಲ್ಲಿಯೇ ತರಬೇತುಗೊಳಿಸುವ ಮೂಲಕ ಪರಿಪೂರ್ಣವಾಗಿ ಮತ್ತು ಸಹಜವಾಗಿ ಕರಗತ ಮಾಡಿಕೊಳ್ಳಲಾಗದ ಯಾವ ವೈಜ್ಞಾನಿಕ ವಿಷಯವೂ ಇಲ್ಲ. ವಿದ್ಯಾರ್ಥಿಯ ಮನಸ್ಸಿನಲ್ಲಿ ಗಾಢ ಹಾಗೂ ಆತ್ಯಾಕರ್ಷಕ ಆಸಕ್ತಿಯನ್ನು ಹುಟ್ಟಿಸುವುದಾದರೆ ಇದನ್ನು ಸುಲಭವಾಗಿ ಸಾಧಿಸಬಹುದು. ಒಂದು ಸಲ ಮಗುವಿಗೆ ಈ ರುಚಿ ಹಚ್ಚಿದರೆ, ತನ್ನ ಬಿಡುವಿನ ವೇಳೆಯಲ್ಲಿ ಯುವಕರ ಉತ್ಸಾಹದೊಂದಿಗೆ ಆ ಮಗು ಮುಂದುವರೆಯುತ್ತದೆ ಎಂದು ವಿಶ್ವಾಸವಿಡಬಹುದು. ಇದು ಆನಂತರದ ವಯಸ್ಸಿನಲ್ಲಿ ತರಗತಿಯಲ್ಲಿ ಆತನಿಗೆ ಎಲ್ಲವನ್ನೂ ಬೋಧಿಸುವ ಅಗತ್ಯವಿಲ್ಲದಂತೆ ಮಾಡುತ್ತದೆ.

ಉಳಿದ ಸಾಮರ್ಥ್ಯಗಳೊಂದಿಗೆ ವಿವೇಚಿಸುವ ಸಾಮರ್ಥ್ಯವನ್ನೂ ಸಹಜವಾಗಿ ತರಬೇತುಗೊಳಿಸಲಾಗುತ್ತದೆ. ಸರಿಯಾದ ವಿಚಾರ, ಅಳತೆ ಮಾಡುವುದು, ಬಣ್ಣ, ಶಬ್ದ, ಪರಿಮಳ ಇತ್ಯಾದಿಗಳ ಸೊಗಸನ್ನು ಮೆಚ್ಚಿಕೊಳ್ಳುವುದು ಮತ್ತು ಯಾವುದು ತಪ್ಪು ಎಂಬುದನ್ನು ಪ್ರತಿಯೊಂದು ಹೆಜ್ಜೆಯಲ್ಲಿಯೂ ವಿದ್ಯಾರ್ಥಿಯು ನಿರ್ಧರಿಸಬೇಕಾಗುತ್ತದೆ. ಅನೇಕವೇಳೆ, ತೆಗೆದುಕೊಂಡ ತೀರ್ಮಾನಗಳು ಮತ್ತು ಗುರುತಿಸಿದ ವ್ಯತ್ಯಾಸಗಳು ಅತ್ಯಂತ ಸೂಕ್ಷ್ಮವೂ ನಯವಾದುದಾಗಿಯೂ ಇರಬೇಕಾಗುತ್ತದೆ. ಮೊದಮೊದಲು ಹಲವು ತಪ್ಪುಗಳಾಗುತ್ತವೆ, ಆದರೆ ತೀರ್ಮಾನಗಳ ಫಲಿತಾಂಶಗಳನ್ನು ಎದಿರುನೋಡದೇ ತನ್ನ ವಿವೇಚನಾ ಶಕ್ತಿಯಲ್ಲಿ ವಿಶ್ವಾಸವಿಡುವುದನ್ನು ವಿದ್ಯಾರ್ಥಿಗೆ ಕಲಿಸಬೇಕು. ವಿವೇಚನಾಶಕ್ತಿಯು ತನ್ನ ಕೆಲಸವನ್ನು ಸರಿಯಾಗಿ ನಿರ್ವಹಿಸಬೇಕೆಂಬ ಕರೆಗೆ ಜಾಗ್ರತೆಯಾಗಿ ಸ್ಪಂದಿಸಿ, ತನ್ನೆಲ್ಲ ದೋಷಗಳನ್ನು ಪರಿಹರಿಸಿಕೊಂಡು ಸರಿಯಾಗಿ - ಸೂಕ್ಷ್ಮವಾಗಿ

ವಿವೇಚಿಸಲು ಆರಂಭಿಸುವುದನ್ನು ನಾವು ನೋಡಬಹುದು. ವಿದ್ಯಾರ್ಥಿಗೆ ಇದನ್ನು ಅರ್ಥ ಮಾಡಿಸಲು ಇರುವ ಅತ್ಯುತ್ತಮ ಮಾರ್ಗವೆಂದರೆ ತನ್ನ ತೀರ್ಮಾನಗಳನ್ನು ಉಳಿದವರ ತೀರ್ಮಾನಗಳೊಂದಿಗೆ ಹೋಲಿಸಲು ಕಲಿಸುವುದು. ಅವನ ತೀರ್ಮಾನಗಳು ತಪ್ಪಾಗಿದ್ದಾಗ, ಅದು ಎಷ್ಟರ ಮಟ್ಟಿಗೆ ಸರಿ ಇದೆ ಮತ್ತು ಎಲ್ಲಿ ತಪ್ಪಿದ್ದಾನೆ ಎಂಬುದನ್ನು ಮೊದಲು ಅವನ ಗಮನಕ್ಕೆ ತಂದು, ತದನಂತರ ಅವನು ಈ ಅಂಶಗಳನ್ನು ತಾನಾಗಿಯೇ ಮನವರಿಕೆ ಮಾಡಿಕೊಳ್ಳಲು ಪ್ರೋತ್ಸಾಹ ನೀಡಬೇಕು. ಪ್ರತಿ ಸಲವು ಅವನು ಸರಿ ಇದ್ದರೆ, ಅದನ್ನು ಅವನ ಗಮನಕ್ಕೆ ಸ್ಪಷ್ಟವಾಗಿ ಮತ್ತು ಪ್ರೋತ್ಸಾಹದಾಯಕವಾಗಿ ತರಬೇಕು, ಇದರಿಂದ ಅವನ ಆತ್ಮವಿಶ್ವಾಸ ಹೆಚ್ಚುತ್ತದೆ.

ಹೋಲಿಸುವ ಮತ್ತು ವ್ಯತ್ಯಾಸ ಗುರುತಿಸುವ ಪ್ರಕ್ರಿಯೆಯಲ್ಲಿ ತೊಡಗಿದಾಗ, ಖಂಡಿತವಾಗಿಯೂ ಬೇರೊಂದು ಸಾಮರ್ಥ್ಯಕೇಂದ್ರವು ಬೆಳವಣಿಗೆ ಹೊಂದುತ್ತದೆ, ಅದುವೇ ಸಾದೃಶ್ಯ ಕೇಂದ್ರ. ವಿದ್ಯಾರ್ಥಿಯು ಸಹಜವಾಗಿ ಸಾದೃಶ್ಯಗಳನ್ನು ಹೋಲಿಸಿ, ಅವುಗಳ ಆಧಾರದ ಮೇಲೆ ವಾದ ಮಾಡುತ್ತಾನೆ. ಸಾಮರ್ಥ್ಯದ ಮಿತಿ ಹಾಗೂ ದೋಷಗಳನ್ನು ಗಮನಿಸುತ್ತಲೇ ಅದನ್ನು ಉಪಯೋಗಿಸಲು ಅವನನ್ನು ಪ್ರೋತ್ಸಾಹಿಸಬೇಕು. ಹೀಗೆ, ಜ್ಞಾನ ಗಳಿಕೆಯಲ್ಲಿ ಅತ್ಯಗತ್ಯ ಸಹಾಯಕವಾದ ಸರಿಯಾದ ಸಾದೃಶ್ಯ ರೂಪಿಸುವ ಅಭ್ಯಾಸ ಮಾಡಿಕೊಳ್ಳಲು ಅವನು ತರಬೇತಿ ಪಡೆಯುತ್ತಾನೆ.

ನೇರ ತಾರ್ಕಿಕ ಸಾಮರ್ಥ್ಯವನ್ನು ಹೊರತು ಪಡಿಸಿ ನಾವು ಹೇಳದೆ ಬಿಟ್ಟ ಇನ್ನೊಂದು ಸಾಮರ್ಥ್ಯವೆಂದರೆ, ಕಲ್ಪನೆ. ಇದು ಅತ್ಯಂತ ಮುಖ್ಯ ಮತ್ತು ಅತ್ಯಗತ್ಯ ಸಾಧನ. ಇದನ್ನು ಮೂರು ಕಾರ್ಯಗಳಲ್ಲಿ ವಿಭಜಿಸಬಹುದು: ಮಾನಸಿಕ ಚಿತ್ರಗಳನ್ನು ರೂಪಿಸುವುದು, ವಿಚಾರಗಳು, ಕಲ್ಪನೆಗಳು, ಅನುಕರಣೆಗಳನ್ನು ಸೃಷ್ಟಿಸುವ ಶಕ್ತಿ, ಅಥವಾ ಈಗಿರುವ ವಿಚಾರ ಮತ್ತು ಕಲ್ಪನೆಗಳ ಹೊಸ ಬಗೆಯ ಜೋಡಣೆಗಳು, ವಸ್ತುಗಳಲ್ಲಿನ ಸತ್ವ, ಅಂದರೆ ಸೌಂದರ್ಯ, ಸೊಬಗು, ಹಿರಿಮೆ, ಅಂತರ್ಗತ ಸೂಚ್ಯತೆ, ಜಗತ್ತನ್ನು ವ್ಯಾಪಿಸಿರುವ ಸಂವೇಗಾತ್ಮಕ ಮತ್ತು ಆಧ್ಯಾತ್ಮಿಕ ಜೀವನ – ಇವುಗಳನ್ನು ಗ್ರಹಿಸಿ ಗೌರವಿಸುವುದು. ಇದು ಎಲ್ಲ ರೀತಿಯಲ್ಲೂ ಹೊರಗಿನ ವಸ್ತುಗಳನ್ನು ಪರಿವೀಕ್ಷಿಸುವ ಮತ್ತು ಹೋಲಿಸುವ ಸಾಮರ್ಥ್ಯಗಳ ತರಬೇತಿಯಂತೇ ಬಹು ಮುಖ್ಯವಾದುದು. ಆದರೆ, ಇದಕ್ಕೆ ಪ್ರತ್ಯೇಕವಾದ ಮತ್ತು ಪೂರ್ಣಪ್ರಮಾಣ ವಿಧಾನದ ಅಗತ್ಯವಿದೆ.

ಮನಸ್ಸಿನ ಸಾಮರ್ಥ್ಯಗಳನ್ನು ಮೊದಲು ವಸ್ತುಗಳ ಮೇಲೆ, ಅನಂತರ ಪದಗಳು ಮತ್ತು ವಿಚಾರಗಳ ಮೇಲೆ ಪ್ರಯೋಗಿಸಬೇಕು. ಭಾಷೆಯ ಕುರಿತಾದ ನಮ್ಮ ಪ್ರಯತ್ನಗಳು ಕೂಡ ತುಂಬ ಯಾಂತ್ರಿಕವಾಗಿದ್ದು, ಪದ ಬಳಕೆಗಿರುವ ಸೂಕ್ಷ್ಮ ಪ್ರಜ್ಞೆಯ ಕೊರತೆಯು ಬೌದ್ಧಿಕತೆಯನ್ನು ಕುಗ್ಗಿಸುತ್ತವೆ, ಹಾಗೂ ಅದರ ಕಾರ್ಯಾಚರಣೆಯ ಸೂಕ್ಷ್ಮತೆ ಮತ್ತು ಯಥಾರ್ಥತೆಯನ್ನು ಮಿತಿಗೊಳಿಸುತ್ತದೆ. ಮನಸ್ಸು ಮೊದಲು ಪದದ ರೂಪ, ಶಬ್ದ, ಅರ್ಥಗಳನ್ನು ಪೂರ್ಣವಾಗಿ ಗಮನಿಸಲು ಅಭ್ಯಾಸಮಾಡಿಕೊಳ್ಳಬೇಕು; ನಂತರ ರೂಪವನ್ನು ಸಾಮ್ಯತೆ ಮತ್ತು ವ್ಯತ್ಯಾಸಗಳಲ್ಲಿ ಅದೇ ಬಗೆಯ ಇತರ ರೂಪಗಳೊಂದಿಗೆ ಹೋಲಿಸಲು ಕಲಿಯಬೇಕು, ಹೀಗೆ ವ್ಯಾಕರಣಾತ್ಮಕ ಅರಿವಿನ ಅಡಿಪಾಯವನ್ನು ರೂಪಿಸಬೇಕು; ನಂತರ ಒಂದೇ ರೀತಿಯ ಪದಗಳ ಸೂಕ್ಷ್ಮ ಅರ್ಥ ಮತ್ತು ಭಿನ್ನವಾಕ್ಯಗಳ ರೂಪ ಮತ್ತು ಛಂದೋಬದ್ಧತೆಯ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಲು ಅಭ್ಯಾಸಮಾಡಿಕೊಳ್ಳಬೇಕು; ಹೀಗೆ ಸಾಹಿತ್ಯಕ ಮತ್ತು ಪದಾನ್ವಯದ ಸಾಮರ್ಥ್ಯಗಳಿಗೆ ಅಡಿಪಾಯವನ್ನು ರೂಪಿಸಬೇಕು. ಒಂದೇ ರೀತಿಯಲ್ಲಿ ಕಲಿಸುವುದು ಮತ್ತು ಬಾಯಿಪಾಠ ಮಾಡುವುದನ್ನು ಕೈಬಿಟ್ಟು, ಕುತೂಹಲ ಮತ್ತು ಆಸಕ್ತಿಯನ್ನು ಆಧರಿಸಿ, ಇದೆಲ್ಲವನ್ನೂ ಅನೌಪಚಾರಿಕವಾಗಿ ಮಾಡಬೇಕು. ನಿಜವಾದ ಜ್ಞಾನವು ವಸ್ತುಗಳು, 'ಅರ್ಥ'ಗಳನ್ನು ಆಧರಿಸುತ್ತದೆ, ಮತ್ತು ವಿಷಯವನ್ನು ಕರಗತ ಮಾಡಿಕೊಂಡಾಗ ಮಾತ್ರ, ಅದರ ಮಾಹಿತಿಯನ್ನು ವಿದ್ಯುಕ್ತಗೊಳಿಸಲು ಮುನ್ನಡೆಯುತ್ತದೆ.

# VIII

# ತಾರ್ಕಿಕ ಸಾಮರ್ಥ್ಯದ ತರಬೇತಿ

ತಾರ್ಕಿಕ ವಿವೇಚನೆಯು ಕಾರ್ಯನಿರ್ವಹಿಸಲು ಅಗತ್ಯವಾಗಿ ಬೇಕಾದ ಸಾಮಗ್ರಿ ಸಂಗ್ರಹಣಾ ಸಾಮರ್ಥ್ಯಗಳ ತರಬೇತಿಯನ್ನು ತಾರ್ಕಿಕ ವಿವೇಚನೆಯ ತರಬೇತಿಯು ಅತ್ಯಗತ್ಯವಾಗಿ ಅನುಸರಿಸಬೇಕು. ಅಷ್ಟು ಮಾತ್ರವಲ್ಲ, ಮನಸ್ಸು ಆಲೋಚನೆಗಳೊಂದಿಗೆ ಯಶಸ್ವಿಯಾಗಿ ವ್ಯವಹರಿಸುವ ಮೊದಲು, ಪದಗಳೊಂದಿಗೆ ವ್ಯವಹರಿಸುವ ಸಾಮರ್ಥ್ಯವನ್ನು ಬೆಳೆಸಿಕೊಂಡಿರಬೇಕಾಗಿರುತ್ತದೆ. ಇಲ್ಲಿರುವ ಪ್ರಶ್ನೆಯೆಂದರೆ, ಈ ಪೂರ್ವಭಾವಿ ಕಾರ್ಯಗಳನ್ನು ಪೂರೈಸಿದ ಬಳಿಕ, ವಿದ್ಯಾರ್ಥಿಯು ಆಧಾರ ಪ್ರಮೇಯದಿಂದ ಸರಿಯಾಗಿ ಆಲೋಚಿಸುವಂತೆ ಕಲಿಸುವ ಅತ್ಯುತ್ತಮ ದಾರಿ ಯಾವುದು ಎಂಬುದು. ಏಕೆಂದರೆ, ಆಧಾರ ಪ್ರಮೇಯವಿಲ್ಲದೇ ತಾರ್ಕಿಕ ವಿವೇಚನೆಯು ಮುಂದುವರೆಯಲು ಸಾಧ್ಯವಾಗುವುದಿಲ್ಲ. ವಾಸ್ತವಾಂಶಗಳ ಆಧಾರದಿಂದ ಒಂದು ತೀರ್ಮಾನಕ್ಕೆ ಬರುವುದನ್ನು, ಅಥವಾ ಮೊದಲು ರೂಪುಗೊಂಡ ತೀರ್ಮಾನಗಳಿಂದ ಹೊಸ ತೀರ್ಮಾನವನ್ನು, ಅಥವಾ ಒಂದು ವಾಸ್ತವಾಂಶದಿಂದ ಇನ್ನೊಂದು ವಾಸ್ತವಾಂಶವನ್ನು ಅದು ತರ್ಕಿಸುತ್ತದೆ. ಅದು ಒಂದೋ ಅನುಗಮನದಿಂದ ಸಾಮಾನ್ಯೀಕರಿಸಲಾದ ತೀರ್ಮಾನಕ್ಕೆ ಬರುತ್ತದೆ (induces), ತಾರ್ಕಿಕವಾಗಿ ನಿಗಮನಮಾಡುತ್ತದೆ (deduces - ಸಾಮಾನ್ಯ ಮೂಲತತ್ತ್ವಗಳಿಂದ ನಿರ್ದಿಷ್ಟ ವಿಷಯಗಳನ್ನು ಅನುಮಾನಿಸುವುದು), ಇಲ್ಲವೋ ಸುಮ್ಮನೇ ವಾಸ್ತವಾಂಶಗಳಿಂದ ತೀರ್ಮಾನಿಸುತ್ತದೆ (infers). ನಾನು ದಿನನಿತ್ಯ ಸೂರ್ಯೋದಯವನ್ನು ನೋಡುತ್ತೇನೆ; ಅದು ಸ್ವಲ್ಪ ಸಮಯದ ಕತ್ತಲೆಯ ನಂತರ ಒಂದು ನಿಯಮವೆಂಬಂತೆ ನಿತ್ಯವೂ ಸೂರ್ಯೋದಯವಾಗುತ್ತದೆ ಎಂಬ ತೀರ್ಮಾನಕ್ಕೆ ಬರುತ್ತೇನೆ ಅಥವಾ ತರ್ಕಿಸುತ್ತೇನೆ. ಹೊಗೆಯಿದ್ದಲ್ಲಿ ಬೆಂಕಿ ಇರುತ್ತದೆ ಎಂದು ಈಗಾಗಲೇ ನಾನು ಖಚಿತವಾಗಿ ಗುರುತಿಸಿದ್ದೇನೆ. ವಾಸ್ತವಾಂಶಗಳನ್ನು ವೀಕ್ಷಿಸುವ ಮೂಲಕ ನಾನು ಆ ಸಾಮಾನ್ಯ ನಿಯಮದ ತೀರ್ಮಾನಕ್ಕೆ ಬಂದಿರುತ್ತೇನೆ. ಒಂದು ನಿರ್ದಿಷ್ಟ ಪ್ರಕರಣದಲ್ಲಿ ಹೊಗೆಯಿದ್ದಲ್ಲಿ ಬೆಂಕಿ ಇರುತ್ತದೆ ಎಂಬ ತಾರ್ಕಿಕ ತೀರ್ಮಾನಕ್ಕೆ ಬರುತ್ತೇನೆ. ಆ ನಿರ್ದಿಷ್ಟ ಸನ್ನಿವೇಶದಲ್ಲಿ ಬೇರೆ ಯಾವುದೇ ಸಂಭಾವ್ಯ ಕಾರಣಗಳಿಲ್ಲದಿದ್ದಾಗ ಯಾವನೋ ಒಬ್ಬ ಮನುಷ್ಯ ಬೆಂಕಿ ಹಚ್ಚಿರಬೇಕು ಎಂದು ತರ್ಕಿಸುತ್ತೇನೆ. ನಾನಿದನ್ನು ತಾರ್ಕಿಕವಾಗಿ ನಿಗಮನ ಮಾಡಲು ಸಾಧ್ಯವಿಲ್ಲ, ಏಕೆಂದರೆ ಎಲ್ಲ ಸಂದರ್ಭಗಳಲ್ಲೂ ಬೆಂಕಿಯನ್ನು ಮನುಷ್ಯನು ಹಚ್ಚಿರುತ್ತಾನೆ ಎಂದು ಹೇಳಲಾಗದು; ಅಲ್ಲಿ ಜ್ವಾಲಾಮುಖಿಯಿಂದ ಆಗಿದ್ದಿರಬಹುದು ಅಥವಾ ಸಿಡಿಲಿನಿಂದಲೂ ಆಗಿರಬಹುದು ಅಥವಾ ಸುತ್ತಲಲ್ಲಿ ಎಲ್ಲಿಯೋ ಯಾವುದೋ ಬಗೆಯ ಘರ್ಷಣದಿಂದಲೂ ಆಗಿದ್ದಿರಬಹುದು.

ತಾರ್ಕಿಕತೆಯು ಸರಿಯಾಗಿರಲು ಮೂರು ಸಂಗತಿಗಳು ಅಗತ್ಯ: ಮೊದಲನೆಯದು, ನಾನು ಯಾವ ವಾಸ್ತವಾಂಶ ಅಥವಾ ತೀರ್ಮಾನಗಳಿಂದ ಆರಂಭಿಸುತ್ತೇನೋ ಅವುಗಳ ಯಥಾರ್ಥತೆ; ಎರಡನೆಯದು, ನಾನು ಯಾವ ದತ್ತಾಂಶಗಳಿಂದ ಆರಂಭಿಸುತ್ತೇನೋ ಅವುಗಳ ಸಂಪೂರ್ಣತೆ ಮತ್ತು ನಿಖರತೆ; ಮೂರನೆಯದು, ಅದೇ ವಾಸ್ತವಾಂಶಗಳಿಂದಾಗುವ ಇತರ ಸಾಧ್ಯ ಅಥವಾ ಅಸಾಧ್ಯ ತೀರ್ಮಾನಗಳನ್ನು ತೆಗೆದುಹಾಕುವುದು. ಭಾಗಶಃ ಈ ಪೂರ್ವಭಾವಿ ಷರತ್ತುಗಳನ್ನು ಪಡೆದುಕೊಳ್ಳುವಲ್ಲಿ ತಪ್ಪಿಸಬಹುದಾದ ನಿರ್ಲಕ್ಷ್ಯ ಮತ್ತು ಅಸಡ್ಡೆ, ಭಾಗಶಃ ಸರಿಯಾದ ಎಲ್ಲ ಸತ್ಯಸಂಗತಿಗಳನ್ನು ಪಡೆದುಕೊಳ್ಳುವಲ್ಲಿ ಇರುವ ಸಮಸ್ಯೆ, ಇನ್ನೂ ಕಷ್ಟಕರವಾದುದು ಎಲ್ಲ ಸತ್ಯಸಂಗತಿಗಳನ್ನು ಪೂರ್ಣವಾಗಿ ಪಡೆದುಕೊಳ್ಳುವಲ್ಲಿರುವ

ಸಮಸ್ಯೆ, ಇವೆಲ್ಲಕ್ಕಿಂತ ಇನ್ನೂ ಕಷ್ಟಕರವಾದುದು ಸರಿಯಾಗಿರುವ ತೀರ್ಮನವೊಂದನ್ನುಳಿದು ಉಳಿದವನ್ನು ತೆಗೆದುಹಾಕುವುದು – ತಾರ್ಕಿಕ ವಿವೇಚನೆಯು ದೋಷಪೂರಿತವಾಗುವುದಕ್ಕೆ ಇವೆಲ್ಲವೂ ಕಾರಣವಾಗುತ್ತವೆ. ಒಂದು ಅನಿವಾರ್ಯ ನಿಯಮವಾಗಿ ಗುರುತ್ವಾಕರ್ಷಣ ನಿಯಮದ ಸಾರ್ವತ್ರಿಕತೆಯಷ್ಟು ಪರಿಪೂರ್ಣವಾಗಿ ಸ್ಥಾಪಿಸಲಾದ ಸತ್ಯಸಂಗತಿ ಇನ್ನೊಂದಿಲ್ಲವೆಂದು ಭಾವಿಸಲಾಗುತ್ತದೆ. ಆದಾಗ್ಯೂ, ಇದಕ್ಕೆ ಅಸಂಗತವಾದ ಹೊಸದೊಂದು ಸತ್ಯಸಂಗತಿಯು ಈ ಸ್ಥಾಪಿತ ಸಾರ್ವತ್ರಿಕತೆ ಎಂದು ಭಾವಿಸಲಾದದ್ದನ್ನು ತಲೆಕೆಳಗು ಮಾಡಬಲ್ಲದು. ಈ ಬಗೆಯ ಸತ್ಯಸಂಗತಿಗಳು ಇವೆ ಕೂಡ. ಆದಾಗ್ಯೂ, ಶ್ರದ್ಧೆ ಮತ್ತು ಸೂಕ್ಷ್ಮಮತಿಯಿಂದ ದೋಷಪೂರಿತತೆಯನ್ನು ಸಾಧ್ಯವಾದಷ್ಟು ಕಡಮೆ ಮಾಡಬಹುದು.

ತಾರ್ಕಿಕ ವಿವೇಚನೆಯನ್ನು ತರಬೇತುಗೊಳಿಸಲು ತರ್ಕಶಾಸ್ತ್ರವನ್ನು ಕಲಿಸುವುದು ಸಾಮಾನ್ಯ ರೂಢಿ. ವಿಷಯಕ್ಕೆ ಸಂಬಂಧಿಸಿದ ಜ್ಞಾನವನ್ನು ನೇರವಾಗಿ ಪಡೆಯುವುದಕ್ಕಿಂತ ಅದನ್ನು ಪುಸ್ತಕದ ಮೂಲಕ ಪಡೆಯುವುದು ಅಧ್ಯಯನದ ಪ್ರಚಲಿತ ದೋಷದ ಒಂದು ಉದಾಹರಣೆಯಾಗಿದೆ. ತರ್ಕಿಸುವ ಅನುಭವ ಮತ್ತು ಅದರ ದೋಷಗಳನ್ನು ಮನಸ್ಸಿನ ಅರಿವಿಗೆ ತರಬೇಕು ಮತ್ತು ಇವು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಸ್ವತಃ ಗಮನಿಸಲು ಕಲಿಸಬೇಕು; ಉದಾಹರಣೆಯಿಂದ ನಿಯಮದತ್ತ ಚಲಿಸುವುದನ್ನು ಮತ್ತು ನಿಯಮಗಳ ಸಂಗ್ರಹಣೆಯ ಸಂಯೋಜನೆಯಿಂದ ವಿಷಯದ ಔಪಚಾರಿಕ ಶಾಸ್ತ್ರೀಯತೆ ಎಡೆಗೆ ಸಾಗುವುದನ್ನು ಕಲಿಸಬೇಕೇ ವಿನಃ, ಔಪಚಾರಿಕ ಶಾಸ್ತ್ರದಿಂದ ನಿಯಮದ ಎಡೆಗೆ, ನಿಯಮದಿಂದ ಉದಾಹರಣೆ ಎಡೆಗೆ ಸಾಗುವುದಲ್ಲ.

ಕಾರ್ಯಕಾರಣಗಳನ್ನು ಗುರುತಿಸಿ, ಸತ್ಯಸಂಗತಿಗಳಿಂದ ತೀರ್ಮಾನಕ್ಕೆ ಬರಲು ಸ್ವತಃ ಎಳೆಯ ಮನಸ್ಸೇ ಆಸಕ್ತಿ ಹೊಂದಲು ತರಬೇತಿ ನೀಡುವುದು ಮೊದಲ ಹೆಜ್ಜೆಯಾಗಿರಬೇಕು. ತದನಂತರ ತನ್ನ ಸಾಫಲ್ಯ-ವೈಫಲ್ಯಗಳನ್ನು ಗಮನಿಸುವತ್ತ, ಆ ಸಾಫಲ್ಯ-ವೈಫಲ್ಯಗಳಿಗೆ ಕಾರಣಗಳನ್ನು ಗುರುತಿಸುವತ್ತ ಮುನ್ನಡೆಸಬೇಕು; ಅಲ್ಲದೆ ಆರಂಭದಲ್ಲಿಯೇ ಸತ್ಯಸಂಗತಿಗಳು ಅಯಥಾರ್ಥವಾಗಿರುವುದು, ಅಸಮಗ್ರ ಸತ್ಯಸಂಗತಿಗಳಿಂದ ತೀರ್ಮಾನಗಳನ್ನು ತೆಗೆದುಕೊಳ್ಳಲು ಅವಸರಿಸಿರುವುದು, ದತಾಂಶಗಳಿಂದ ಬೆಂಬಲಿಸಲಾಗದ ಅಥವಾ ಸಂದೇಹಾಸ್ಪದವಾಗಿರುವ ಅಸಂಭವನೀಯ ತೀರ್ಮಾನಗಳನ್ನು ಸ್ವೀಕರಿಸುವಾಗಿನ ನಿರ್ಲಕ್ಷ್ಯ, ಇತರ ಸಾಧ್ಯ ವಿವರಣೆ ಅಥವಾ ತೀರ್ಮಾನಗಳನ್ನು ಪರಿಗಣಿಸಲು ಬಯಸದ ಆಲಸ್ಯ ಅಥವಾ ಪೂರ್ವಾಗ್ರಹ – ಇಂಥ ಎಲ್ಲವನ್ನು ಗಮನಿಸುವುದರ ಕಡೆಗೆ ಸಾಗಬೇಕು. ಹೀಗೆ, ಮನುಷ್ಯನ ತಾರ್ಕಿಕತೆಯು ದೋಷಪೂರಿತತೆಯನ್ನು ಅನುಮತಿಸುವಷ್ಟು ಮನಸ್ಸನ್ನು ಸರಿಯಾಗಿ ವಿವೇಚಿಸಲು ತರಬೇತುಗೊಳಿಸಬಹುದು. ಸ್ವಲ್ಪವೇ ಅವಧಿಯಲ್ಲಿ ಸುಲಭವಾಗಿ ಕರಗತಮಾಡಿಕೊಳ್ಳುವ ತನಕ ಔಪಚಾರಿಕ ತರ್ಕದ ಅಧ್ಯಯನವನ್ನು ಮುಂದಕ್ಕೆ ಹಾಕಬೇಕು, ಏಕೆಂದರೆ ಅದು ವಿದ್ಯಾರ್ಥಿಗೆ ಈಗಾಗಲೇ ಚೆನ್ನಾಗಿಯೇ ಗೊತ್ತಿರುವ ಕಲೆಯನ್ನು ಸುವ್ಯವಸ್ಥಿತಗೊಳಿಸುವುದು ಮಾತ್ರ ಆಗಿರುತ್ತದೆ.

# ಇಲ್ಲಿಂದ ಕೊನೆಯವರೆಗೆ ಐಚ್ಛಿಕ ವಾಚಿಕೆಗಳು

# ಶಿಕ್ಷಣ ಕುರಿತು ಶ್ರೀ ಅರಬಿಂದೋ ಅವರ ಚಿಂತನೆಗಳು

## ಭಾರತದ ಮೆದುಳು

### I

ಬಹುದೀರ್ಘ ಕಾಲದಿಂದ ರಾಜಕೀಯ ಮತ್ತು ಆರ್ಥಿಕ ವಿಷಯಗಳಲ್ಲಿ ಕಳೆದುಹೋಗಿರುವ ಭಾರತೀಯ ಮನಸ್ಸಿಗೆ, ಬಹುಶಃ ತನ್ನ ದಿಗಂತವನ್ನು ವಿಸ್ತರಿಸಿಕೊಳ್ಳುವ ಸಮಯ ಈಗ ಬಂದಿದೆ ಎಂದು ತೋರುತ್ತಿದೆ. ಇಂಥ ವಿಸ್ತರಣೆಯು ಬಂಗಾಲಕ್ಕೆ ವಿಶೇಷವಾಗಿ ಅತ್ಯಗತ್ಯವಾಗಿದೆ.

ಬಂಗಾಲಿಯು ಭಾರತದ ಉನ್ನತ ವಿಚಾರವನ್ನು ಯಾವಾಗಲೂ ಸಕಾರಗೊಳಿಸಿದ್ದಾನೆ ಮತ್ತು ಈಗಲೂ ಮುಂದುವರಿಸುತ್ತಿದ್ದಾನೆ. ಏಕೆಂದರೆ, ಮುಂಬರಲಿರುವ ಹೊಸ ಜನಾಂಗಕ್ಕೆ ಅತ್ಯಗತ್ಯವಾಗಿರುವ ಸಾಮರ್ಥ್ಯಗಳನ್ನು ಆತ ವಿಶೇಷವಾಗಿ ಹೊಂದಿದ್ದಾನೆ. ಮಾನವಕುಲವು ಒಂದು ಬಹುದೊಡ್ಡ ಹೆಜ್ಜೆಯನ್ನು ಇಡಬೇಕಿರುವ ಸಂದರ್ಭದಲ್ಲಿ ಅಗತ್ಯವಾದ, ಅಸಾಧಾರಣ ಸ್ಫೂರ್ತಿ ಮತ್ತು ಬೆರಗುಗೊಳಿಸುವ ಮಹತ್ವದ ವಿಚಾರಗಳಿಗೆ ತೆರೆದುಕೊಳ್ಳುವ ಸಂವೇಗ ಮತ್ತು ಕಲ್ಪನೆಯನ್ನು ಆತ ಹೊಂದಿದ್ದಾನೆ. ಹೃದಯದಿಂದ ಆಲೋಚಿಸಬಲ್ಲ ಮೌಲಿಕವಾದ ಕೊಡುಗೆಯನ್ನು ಹೊಂದಿದ್ದಾನೆ. ತಾರ್ಕಿಕತೆಯು ಗ್ರಹಿಸಬಲ್ಲ ಮತ್ತು ತಾರ್ಕಿಕ ಬುದ್ಧಿಶಕ್ತಿಗೆ ನಿಲುಕದ ವಿಚಾರಗಳಲ್ಲಿನ ಸೂಕ್ಷ್ಮ ಅರ್ಥ ವ್ಯತ್ಯಾಸಗಳು ಮತ್ತು ನಯನಾಜೂಕುಗಳನ್ನು ಕೆಲವೊಂದು ಮಿತಿಗಳಲ್ಲಿ ಗ್ರಹಿಸಬಲ್ಲ ಕುಶಾಗ್ರಮತಿ ಕೂಡ ಆತನಿಗಿದೆ. ಇದೆಲ್ಲಕ್ಕಿಂತ ಹೆಚ್ಚಾಗಿ, ಶಿಕ್ಷಣದ ನೆರವಿಲ್ಲದೆ ತಾನು ಬಯಸಿದ ಯಾವುದೇ ಜ್ಞಾನವನ್ನು ಸುಲಭವಾಗಿ ಮತ್ತು ದೈವಿಕವಾಗಿ ಪಡೆದ, ಈ ಜನಾಂಗದ ಅತ್ಯುನ್ನತ ಫಲವಾಗಿರುವ ಶ್ರೀರಾಮಕೃಷ್ಣರಲ್ಲಿ ಅರಳಿದ ಸಾಮರ್ಥ್ಯವು ಮಾನವನಲ್ಲಿ ಸುಪ್ತಾವಸ್ಥೆಯಲ್ಲಿದ್ದು ಈಗ ವಿಕಾಸಗೊಳ್ಳಬೇಕಿರುವ, ತರ್ಕ ಮತ್ತು ಕಲ್ಪನೆಗಳನ್ನು ಮೀರಿದ ಇನ್ನೂ ಬೆಳವಣಿಗೆ ಹೊಂದಿರದ ನೇರಜ್ಞಾನದ ಸಾಮರ್ಥ್ಯವನ್ನು ಇತರ ಜನಾಂಗಗಳಿಗಿಂತ ಬಹುದೊಡ್ಡ ಪ್ರಮಾಣದಲ್ಲಿ ಬಂಗಾಲಿಯು ಹೊಂದಿದ್ದಾನೆ. ಇದು ವ್ಯಕ್ತಿ ಮತ್ತು ಜನಾಂಗದ ಸ್ಮೃತಿಪಟಲದಲ್ಲಿ ಶೇಖರವಾಗಿರುವ ಸೀಮಿತ ತಾರ್ಕಿಕತೆ ಮತ್ತು ಹಳೆಯ ಮಾನಸಿಕ ಸಂಬಂಧಗಳು ಅಥವಾ 'ಸಂಸ್ಕಾರಗಳಾಗಿದ್ದು', ಕಲ್ಪನೆಗಳ ಹಸ್ತಕ್ಷೇಪದಿಂದ ಗುರುತಿಸಲಾಗದೆ ಗೊಂದಲಕ್ಕೀಡಾಗಿ ಈಗ ಮನುಷ್ಯನಲ್ಲಿ ಅನಿಯತವಾಗಿ ಕೆಲಸ ಮಾಡುತ್ತಿರುವ ಸಾಮರ್ಥ್ಯವಾಗಿದೆ. ಪ್ರಾಚೀನ ಭಾರತದ ಋಷಿಗಳು ಯೋಗಶಾಸ್ತ್ರದಲ್ಲಿ ರೂಪಿಸಿರುವ ಅಧ್ಯಯನ ಶಿಸ್ತಿನ ಹೊರತಾಗಿ ಇದನ್ನು ಗುರುತಿಸಬಲ್ಲ ಮತ್ತು ನಿತ್ಯಾಭ್ಯಾಸದ ಸಾಧನವನ್ನಾಗಿ ಮಾಡಲು ಆಗದು. ಆದರೆ ಕೆಲವು ಜನಾಂಗಗಳು ಸಾಮಾನ್ಯ

ಮಾನವಕುಲಕ್ಕಿಂತ ಹೆಚ್ಚು ವಿಕಸಿತವಾದ ಅಥವಾ ವಿಕಾಸಗೊಳ್ಳಲು ಹೆಚ್ಚು ಸಿದ್ಧವಾಗಿರುವ ಈ ಕಾರ್ಯವನ್ನು ಹೊಂದಿವೆ; ಇವುಗಳು ಮುಂದಿನ ವಿಕಸನಕ್ಕೆ ಕಾರಣವಾಗುತ್ತವೆ. ಇದಲ್ಲದೇ, ಶತಮಾನಗಳ ಕಾಲ ನಮ್ಮ ಸಂಸ್ಕೃತಿಯ ಭಾಗವಾಗಿರುವ ತಂತ್ರದ ಅಭ್ಯಾಸ ಮತ್ತು ಸುದೀರ್ಘ ಕಾಲದ ಶಕ್ತಿಯ ಉಪಾಸನೆಯಿಂದ ಅಗಾಧವಾದ ಮನೋಬಲವನ್ನು ಹೊಂದಿದೆ. ತನ್ನ ಇಡೀ ರಾಷ್ಟ್ರೀಯ ಚಾರಿತ್ರ್ಯವನ್ನು ಬಂಗಾಲವು ಕೆಲವೇ ವರ್ಷಗಳಲ್ಲಿ ಸಾಧಿಸಿದಂತೆ ಬೇರೆ ಯಾರೂ ಕ್ರಾಂತಿಕಾರಕವಾಗಿ ಪರಿವರ್ತನೆಗೊಳಿಸಲು ಸಾಧ್ಯವಾಗುತ್ತಿರಲಿಲ್ಲ. ದೈವೀಶಕ್ತಿಯನ್ನು ಆಕೆಯ ರೌದ್ರ ಹಾಗೂ ಸೌಮ್ಯ-ಸುಂದರ, ಈ ಎರಡೂ ಅವತಾರಗಳಲ್ಲಿ ಬಂಗಾಲಿಯು ಸದಾ ಆರಾಧನೆ ಮಾಡಿದ್ದಾನೆ; ಸುಂದರ ಮಾತೆಯೇ ಆಗಿರಲಿ, ರೌದ್ರ ಮಾತೆಯೇ ಆಗಿರಲಿ, ಭಯದಲ್ಲಿಯಾಗಲೀ ಭಯಭಕ್ತಿಯಿಂದಾಗಲೀ ಆತ ಎಂದೂ ಹಿಂದೆ ಸರಿದಿಲ್ಲ. ಆತನಲ್ಲಿ ದೈವೀಕಶಕ್ತಿಯು ಪ್ರವಹಿಸಿದಾಗ ಅದಕ್ಕೆ ಸಂಪೂರ್ಣವಾಗಿ ಶರಣಾಗತನಾಗಲು ಆತ ಭಯಪಡಲಿಲ್ಲ; ಅದನ್ನು ಹೃದಯದಲ್ಲಿ ಅನಂತವಾಗಿ ತುಂಬಿಕೊಂಡು, ಅದು ಮುನ್ನಡೆಸಿದತ್ತ ಮೈಮರೆತು ನಡೆಯಲು ಆತ ಹಿಂಜರಿದಿಲ್ಲ. ಅದಕ್ಕೆ ದಕ್ಕಿದ ಕೊಡುಗೆಯೆಂಬಂತೆ ಆತನು ಶಕ್ತಿಯ ಪರಿಪೂರ್ಣ 'ಆಧಾರ' ಆಗಿದ್ದಾನೆ, ಮತ್ತು ಜಗತ್ತು ಈಗ ಹೊಂದಿರುವ ಶಕ್ತಿ ಮತ್ತು ಅನಂತ ಮನೋಬಲದ ಅತ್ಯಂತ ಸಮರ್ಥ ಮತ್ತು ಸಂವೇದನಾಶೀಲ, ಹಾಗೂ ಸ್ಪಂದಿಸುವ ಭಂಡಾರನಾಗಿದ್ದಾನೆ. ಇತ್ತೀಚಿಗೆ ಆ ಮನೋಬಲ ಮತ್ತು ಶಕ್ತಿಯು ಅವನಲ್ಲಿ ಆವೇಗದಿಂದ ಪ್ರವಹಿಸಿ, ಆತನ ಭವಿಷತ್ತಿನ ಗುರಿ ಹಾಗೂ ಅದೃಷ್ಟದ ಮಟ್ಟಕ್ಕೆ ಆತನನ್ನು ಎತ್ತುತ್ತಲಿದೆ. ಈಗ ಆತನು ಶಕ್ತಿಮಾತೆಯನ್ನು ತನ್ನೊಳಗೆ ಹಿಡಿದಿಟ್ಟುಕೊಳ್ಳುವ ಮತ್ತು ಅದನ್ನು ತನ್ನಲ್ಲಿ ಸುರಕ್ಷಿತವಾಗಿರಿಸಿಕೊಳ್ಳುವ ರಹಸ್ಯವನ್ನು ಕಲಿಯಬೇಕಿದೆ. ಆದುದರಿಂದಲೇ ಧಾರ್ಮಿಕ ಮತ್ತು ಆಧ್ಯಾತ್ಮಿಕ ಜಾಗೃತಿಯು ಮುಂದಿನ ಅಗತ್ಯ ಮತ್ತು ಅನಿವಾರ್ಯ ಬೆಳವಣಿಗೆಯಾಗಿರಬೇಕು ಎಂಬುದರ ಕಡೆಗೆ ಗಮನ ಸೆಳೆದಿದ್ದೇವೆ.

ಆದರೆ, ಬಂಗಾಲಿಯು ತನ್ನಲ್ಲಿನ ಬಹುದೊಡ್ಡ ಸಂಪತ್ತಿನ ಜೊತೆಜೊತೆಗೇ ಗಂಭೀರವಾದ ಕೊರತೆಗಳನ್ನೂ ಹೊಂದಿದ್ದಾನೆ. ಪ್ರಮಾಣದಲ್ಲಿ ಬಡಕಲು, ವಿಧಾನ ಹಾಗೂ ಗುಣಮಟ್ಟದಲ್ಲಿ ಸಂಪೂರ್ಣ ದೋಷಯುಕ್ತ ಆದ ಶಿಕ್ಷಣದ ಫಲವಾಗಿರುವ ಜ್ಞಾನದ ಬಹುದೊಡ್ಡ ಕೊರತೆಯು ಭಾರತದ ಇತರೆಡೆ ಇರುವಂತೆ ಆತನಲ್ಲೂ ಇದೆ. ಇಡಿಯಾದ ವಿಚಾರದಿಂದ ದೂರವಿದ್ದರೂ, ಚಿಂತನೆ ಮತ್ತು ಕ್ರಿಯೆಯು ಪೂರ್ಣಗೊಳ್ಳುವುದಕ್ಕೆ ಅತ್ಯಗತ್ಯವಾದಂಥ ಶಕ್ತಿಯಲ್ಲಿ, ಶಾಂತತೆ, ಗಾಂಭೀರ್ಯತೆ ಹಾಗೂ ಸಮಗ್ರವಾಗಿ ವಿವೇಚಿಸುವ ಸಾಮರ್ಥ್ಯದಲ್ಲಿ - ಸಾಮಾನ್ಯವಾಗಿ ಇದನ್ನು ಬೌದ್ಧಿಕ ಅಥವಾ ತಾರ್ಕಿಕ ಶಕ್ತಿ ಎಂದು ಗುರುತಿಸಲಾಗಿದೆ - ಮದ್ರಾಸಿ ಮತ್ತು ಮರಾಠರಂಥ ಭಾರತದ ಇತರ ಜನಾಂಗಗಳಿಗಿಂತ ಬಂಗಾಲಿಯು ದುರ್ಬಲನಾಗಿದ್ದಾನೆ. ತಾರ್ಕಿಕತೆ ಅಥವಾ ತಾರ್ಕಿಕ ಬುದ್ಧಿಶಕ್ತಿಯು ನಿಖರವಾದ ಮತ್ತು ಜಾಗರೂಕನಾದ ವಿದ್ವಾಂಸನನ್ನು, ಗಂಭೀರ ವಿಮರ್ಶಕನನ್ನು, ವಿಚಾರವಾದಿ ಮತ್ತು ತುಂಬ ಮುಂಜಾಗ್ರತೆಯುಳ್ಳ ರಾಜಕಾರಣಿಯನ್ನು, ಸಾಂಪ್ರದಾಯಿಕ ವಿಜ್ಞಾನಿಯನ್ನು ಸ್ವತಃ ಹುಟ್ಟುಹಾಕುತ್ತದೆ; ಈ ಮಹಾನ್ ಪ್ರತಿಭಾರಾಶಿಯು ನಿಧಾನವಾಗಿ ಎಚ್ಚರಿಕೆಯಿಂದ ಪ್ರಗತಿಯನ್ನು ಸಾಧ್ಯವಾಗಿಸುವುದು. ಆದರದು ನಿಜವಾದ ವೀರನನ್ನು ಮತ್ತು ಪ್ರವರ್ತಕನನ್ನು, ಸ್ಫೂರ್ತಿತ ಪ್ರವಾದಿಯನ್ನು, ಬೃಹತ್ ನಿರ್ಮಾತೃವನ್ನು, ರಾಷ್ಟ್ರಗಳ ನಿರ್ಮಾಪಕನನ್ನು ಹುಟ್ಟುಹಾಕದು; ಅದು ಪ್ರಕೃತಿ ಮತ್ತು ನಿಯತಿಯನ್ನು ಅಧೀನಕ್ಕೆ ತಂದುಕೊಳ್ಳದು, ಭವಿಷ್ಯದ ಮೇಲೆ, ಜಗತ್ತಿನ ಮೇಲೆ ಹಿಡಿತ ಸಾಧಿಸದು. ಭಾರತದ ಉಳಿದ ಭಾಗಗಳಲ್ಲಿ ಬಹುಪಾಲು ಈ ಸಾಮರ್ಥ್ಯವು ಪ್ರಬಲವಾಗಿದ್ದು, ಇದುವೇ ಒಂದು ಮಿತಿಯಾಗಿಯೂ ಪರಿಣಮಿಸಿದೆ. ಹೀಗಾಗಿ, ಬಂಗಾಲವು ಮುಂದುವರಿಯುತ್ತಿರುವಾಗ ಅದು ಹಿಂದೆ ಬಿದ್ದಿದೆ. ದೇಶೋದ್ಧಾರಕ್ಕೆಂದು ಮೇಲಿನಿಂದ ಅವತರಿಸಿರುವ ಶಕ್ತಿಗೆ ಸಮರ್ಪಿಸಿಕೊಳ್ಳಲು ಭಾರತದ ಉಳಿದ ಭಾಗವು ಭಯಪಟ್ಟುಕೊಂಡಿದೆ; ಒಂದು, ಅದು ಆ ಶಕ್ತಿಯ ಕರೆಯನ್ನು ನಿರಾಕರಿಸಿದೆ ಅಥವಾ ಮಿತಿಗಳನ್ನು ಇರಿಸಿ ಅದನ್ನು ನಿರ್ದೇಶಿಸಿ,

ಕಡಿವಾಣ ಹಾಕಲು ಒತ್ತಾಯ ಮಾಡಿದೆ. ಕೆಲವರು ಬಲಿಷ್ಠ ಪುರುಷರು ಮುನ್ನಡೆದಿದ್ದಾರೆ, ತಮ್ಮ ಜನಾಂಗವನ್ನು ಅಥವಾ ಅದರ ಒಂದು ಭಾಗವನ್ನು ತಮ್ಮೊಂದಿಗೆ ಕೊಂಡೊಯ್ದಿದ್ದಾರೆ. ಆದರೆ, ಅದು ಭವಿಷ್ಯದ ಕೆಲಸಕ್ಕೆ ಯೋಗ್ಯವಾಗುವ ಮುನ್ನ ಇಡೀ ಜನಾಂಗವು ಅದರ ಚೈತನ್ಯದಲ್ಲಿ ಒಂದಾಗಲೇ ಬೇಕಿದೆ.

ಬಂಗಾಲಿಯು ತನ್ನಲ್ಲಿ ದೈವಿಕ ಶಕ್ತಿಯು ಒಳಹರಿಯುವುದನ್ನು ಯಾವ ರೀತಿಯಲ್ಲೂ ಸೀಮಿತಗೊಳಿಸದೆ ಅಥವಾ ಮುನ್ನಡೆಯುವುದನ್ನು ತಡೆಯದೆ, ಅದರೊಂದಿಗೆ ಹೆಜ್ಜೆ ಹಾಕುವಾಗಲೇ ತಾನು ಹೋಗುತ್ತಿರುವ ದಾರಿ ಕಂಡುಕೊಳ್ಳುವುದನ್ನು ಆತ ಕಲಿಯಬೇಕು. ವಿಚಾರಶಕ್ತಿಯ ತರಬೇತಿಯ ಕೊರತೆಯಿಂದಾಗಿ ತನ್ನ ಆಸಕ್ತಿಯನ್ನು ಹಿಡಿದಿಡುವ ವಿಚಾರಗಳನ್ನು ಅನುಸರಿಸುತ್ತಾನೆ ವಿನಃ, ಅವುಗಳನ್ನು ಆತ ಸಂಪೂರ್ಣವಾಗಿ ತನ್ನದಾಗಿ ಮಾಡಿಕೊಳ್ಳುವುದಿಲ್ಲ. ಅವುಗಳ ಬಗ್ಗೆ ಆಲೋಚನೆ ಮಾಡುವುದೇ ಆದರೆ, ಆತ ಆತುರದಿಂದ ಆಲೋಚಿಸುತ್ತಾನೆಯೇ ಹೊರತು ಸಮಗ್ರವಾಗಿ ಆಲೋಚಿಸುವುದಿಲ್ಲ. ಪರಿಣಾಮವಾಗಿ, ಅವುಗಳನ್ನು ತನ್ನ ತಕ್ಷಣದ ಸುತ್ತಮುತ್ತಲಿನ ಸನ್ನಿವೇಶಗಳಿಗೆ ಅವುಗಳನ್ನು ಹೆಚ್ಚು ಶಕ್ತಿಯುತವಾಗಿ ಅನ್ವಯಿಸಿದರೂ, ಹೊಸ ಸನ್ನಿವೇಶಗಳು ಆತನನ್ನು ಗೊಂದಲಕ್ಕೀಡು ಮಾಡಿ ಅವನು ಒಗ್ಗಿಕೊಂಡಿರುವ ಚಿಂತನೆ ಮತ್ತು ಕ್ರಿಯೆಗೆ ಮೂಲವಾಗಿರುವ ಕೆಲವು ವ್ಯಕ್ತಿಗಳ ನಾಯಕತ್ವಕ್ಕಾಗಿ ಎದುರುನೋಡುತ್ತಾನೆ. ಇದು ದೌರ್ಬಲ್ಯದ ಮೂಲವೂ ಹೌದು. ವರ್ತಮಾನದ, ಅದಕ್ಕೂ ಹೆಚ್ಚಾಗಿ ಭವಿಷತ್ತಿನ ಕೆಲಸಕ್ಕಾಗಿ, ದೇಶದ ಚಾರಿತ್ರ್ಯ ಮತ್ತು ಲೋಕದೃಷ್ಟಿಗಳು ಪರಿವರ್ತನೆಗೊಂಡಿರುವ ಮಟ್ಟಕ್ಕೆ ಅದರ ಮೆದುಳನ್ನು ಕ್ರಾಂತಿಕಾರಗೊಳಿಸುವಂಥ ಚಿಂತನೆ ಮತ್ತು ಜ್ಞಾನಕೇಂದ್ರವೊಂದನ್ನು ಹುಟ್ಟುಹಾಕುವ ಅನಿವಾರ್ಯದ ಅಗತ್ಯವಿದೆ. ನಮ್ಮ ನಾಗರಿಕತೆಗೆ ಹೊಸ ಹೃದಯದ ಅಗತ್ಯವಿದೆ. ನವೀಕರಣವು ಪೂರ್ಣವಾಗಿಲ್ಲವಾದರೂ, ಆ ದಿಕ್ಕಿನಲ್ಲಿ ಆಗಿರುವ ಕೆಲಸವು ಅದರ ಸಾರ್ಥಕತೆಯನ್ನು ಖಚಿತಪಡಿಸುತ್ತದೆ. ಹೊಸ ಮೆದುಳು ಹಾಗೂ ಅದು ತನ್ನ ಕೆಲಸವನ್ನು ತನ್ನೆಲ್ಲ ಸೂಕ್ಷ್ಮತೆಯೊಂದಿಗೆ ಮಾಡಲು ಅಗಾಧ ಜ್ಞಾನದ ಅಗತ್ಯವೂ ಇದೆ.

# II

ಒಂದು ಹೊಸ ಚಿಂತನಾ ಕೇಂದ್ರವು ಶಿಕ್ಷಣದ ಹೊಸ ಕೇಂದ್ರವನ್ನು ಒಳಗೊಂಡಿರುತ್ತದೆ. ನಮ್ಮ ವಿಶ್ವವಿದ್ಯಾಲಯಗಳಲ್ಲಿ ಸದ್ಯ ಜಾರಿಯಲ್ಲಿರುವ ಶಿಕ್ಷಣ ವ್ಯವಸ್ಥೆಯು ಮನುಷ್ಯನ ಮನೋವಿಜ್ಞಾನವನ್ನು ಅಲಕ್ಷಿಸಿ, ಕಠಿಣ ಮತ್ತು ಅನಗತ್ಯ ನಿಯಮಗಳೊಂದಿಗೆ ಎಚ್ಚರಿಕೆಯಿಂದ ಜೋಡಿಸಲಾದ ಹಲವಾರು ಸಣ್ಣ ಮಾಹಿತಿಯ ತುಣುಕುಗಳನ್ನು ಪ್ರಯಾಸದಿಂದ ಮನಸ್ಸಿನಲ್ಲಿ ತುಂಬುತ್ತದೆ. ಈ ಹೇರುವ ಪ್ರಕ್ರಿಯೆಯ ವಿಧಾನಗಳಿಂದಾಗಿ ಮನುಷ್ಯನು ಯಾವುದರ ಮೂಲಕ ಬೌದ್ಧಿಕತೆ, ಪೌರುಷತ್ವ ಮತ್ತು ಶಕ್ತಿಯನ್ನು ಗಳಿಸುತ್ತಾನೋ, ಸೃಜಿಸುತ್ತಾನೋ ಮತ್ತು ಬೆಳೆಸುತ್ತಾನೋ ಆ ಸಾಮರ್ಥ್ಯ ಮತ್ತು ಸಾಧನಗಳಿಗೆ ಹಾನಿಯುಂಟುಮಾಡುತ್ತವೆ, ಅವುಗಳನ್ನು ದುರ್ಬಲಗೊಳಿಸುತ್ತವೆ. ಬಂಗಾಲದಲ್ಲಿ ಆರಂಭವಾಗಿರುವ ಹೊಸ ರಾಷ್ಟ್ರೀಯ ಶಿಕ್ಷಣವು, ಪ್ರಯೋಗ ಮತ್ತು ಪರಿವೀಕ್ಷಣೆಗೆ ಒತ್ತು ನೀಡಿ, ಸ್ಥಳೀಯ ಸಹಜ ಮತ್ತು ಸುಲಭ ಸಾಧನಗಳನ್ನು ಬಳಸಿಕೊಂಡು ವಿಷಯದ ಅಧ್ಯಯನದಲ್ಲಿ ಚಿಂತನಾ ಕ್ರಿಯೆಗೆ ಪ್ರೋತ್ಸಾಹ ನೀಡಿ ತಪ್ಪು ವಿಧಾನಗಳನ್ನು ಅನುಸರಿಸುವುದರಿಂದಾಗುವ ಜ್ಞಾನದ ಸಾಧನಗಳನ್ನು ಹಾಳು ಮಾಡುವ ಅಭ್ಯಾಸವನ್ನು ಸರಿಪಡಿಸುವಷ್ಟರ ಮಟ್ಟಿಗೆ ವಿದ್ಯಾರ್ಥಿಗೆ ಪರಿಚಯಿಸಿದ ಜ್ಞಾನಕ್ಷೇತ್ರವನ್ನು ವಿಸ್ತರಿಸಲು ತುಂಬ ಗಾಢವಾಗಿ ಪ್ರಯತ್ನಿಸಿದೆ. ಆದರೆ, ಹಳೆಯ ವ್ಯವಸ್ಥೆಯಲ್ಲಿ ಅನುಸರಿಸಲಾಗುತ್ತಿದ್ದ ಅನೇಕ ದೋಷಯುಕ್ತ ವಿಧಾನ ಮತ್ತು ವಿಚಾರಗಳನ್ನು ಈ ಹೊಸ ವ್ಯವಸ್ಥೆಯಿಂದಲೂ ಯಥಾವತ್ತಾಗಿ ಪಾಲಿಸಲಾಯಿತು. ಹಳೆಯ ವ್ಯವಸ್ಥೆಗೆ ಒಗ್ಗಿಕೊಂಡಿರುವ ವ್ಯಕ್ತಿಗಳಿಂದಲೇ ತುಂಬಿರುವ ಪರಿಷತ್ತಿನ ಪ್ರಾಬಲ್ಯದಿಂದಾಗಿ ತೀವ್ರ ಪ್ರಗತಿಯ ವೈಶಿಷ್ಟ್ಯಗಳನ್ನು ಒಳಗೊಂಡ ಹೊಸ ವ್ಯವಸ್ಥೆಯ ಪ್ರಾಮಾಣಿಕತೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವುದು ಖಂಡಿತ. ಹೆಚ್ಚಿದ ಬೌದ್ಧಿಕ ಕೆಲಸದ ಹೊರೆಯನ್ನು ನಿಭಾಯಿಸಲು ಸಹಾಯ ಮಾಡುವ ವಿದ್ಯಾರ್ಥಿಯ ದೇಹ ಮತ್ತು ಮೆದುಳನ್ನು ಸಾಕಷ್ಟು ಬಲಗೊಳಿಸದೇ ಆತನು ಅಗತ್ಯವಾಗಿ ಪಡೆದುಕೊಳ್ಳಬೇಕಿರುವ ಮಾಹಿತಿಯ ಪ್ರಮಾಣವನ್ನು ಹೆಚ್ಚಿಸಿರುವುದು ಹೊಸ ಶಿಕ್ಷಣದ ಇನ್ನೊಂದು ದೋಷವಾಗಿದೆ. ಅಲ್ಲದೆ ಇದು ಕೂಡ ಜನಾಂಗದ ಮನಃಶಾಸ್ತ್ರವನ್ನು ಅಲಕ್ಷಿಸಿದ್ದ ಹಳೆಯ ವ್ಯವಸ್ಥೆಯಂತೇ ಇದೆ. ಜ್ಞಾನ ಕ್ಷೇತ್ರದಲ್ಲಿ ಕೇವಲ ಭಾರತೀಯ ವಿಚಾರ ಮತ್ತು ಸಂಸ್ಕೃತಿಯ ವಿಷಯವನ್ನು ಸುಮ್ಮನೇ ಸೇರಿಸುವುದರಿಂದ ಶಿಕ್ಷಣ ವ್ಯವಸ್ಥೆಯು ಭಾರತೀಯವಾಗುವುದಿಲ್ಲ, ಮತ್ತು ಬಂಗಾಲ ರಾಷ್ಟ್ರೀಯ ಕಾಲೇಜಿನಲ್ಲಿ ಕೊಡಲಾಗುತ್ತಿರುವ ಶಿಕ್ಷಣವು ಯುರೋಪಿನ ವ್ಯವಸ್ಥೆಯ ಸುಧಾರಿತ ರೂಪವಷ್ಟೇ ಹೊರತು ಅದು ಭಾರತೀಯ ಅಥವಾ ರಾಷ್ಟ್ರೀಯ ಶಿಕ್ಷಣವಲ್ಲ. ತಪ್ಪಿಸಬೇಕಾದ ಮತ್ತು ಅಜಾಗರೂಕ ಮನಸ್ಸುಗಳು ಹೊಂದಿರುವ ಪ್ರವೃತ್ತಿಯಾಗಿರುವ ಇನ್ನೊಂದು ದೋಷವೆಂದರೆ, ಶಿಕ್ಷಣವು ರಾಷ್ಟ್ರೀಯವಾಗಿರಲು ಬಂಗಾಲದ ಹಳೆಯ 'ಟೋಲ್' ಶಿಕ್ಷಣ ವ್ಯವಸ್ಥೆಯ ಗುಣಲಕ್ಷಣಗಳನ್ನೆಲ್ಲ ಮತ್ತೆ ಜಾರಿಗೆ ತರಬೇಕೆಂಬ ಪ್ರತಿಗಾಮಿ ವಿಚಾರ. ತನ್ನ ನೈತಿಕ ಹಾಗೂ ಬೌದ್ಧಿಕ ಕೊರತೆಗಳಿಂದಾಗಿ ವಿದೇಶಿಯರಿಗೆ ಮಣೆ ಹಾಕಿದ ಇದು ಹದಿನೆಂಟನೇ ಶತಮಾನದ ಭಾರತವನ್ನು ಮರುಸ್ಥಾಪಿಸುವ ಪ್ರಯತ್ನವಾಗಿರದೆ ಪ್ರಾಚೀನ ಹಾಗೂ ಶಕ್ತಿಶಾಲಿಯಾದ ಭಾರತದ ಚೈತನ್ಯ, ಆದರ್ಶಗಳು ಮತ್ತು ವಿಧಾನಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿ ರೂಪದಲ್ಲಿ, ಹೆಚ್ಚು ಆಧುನಿಕ ಸಂಘಟನೆಯೊಂದಿಗೆ ಪುನಶ್ಚೇತನಗೊಳಿಸಬೇಕಾದ ಅಗತ್ಯವಿದೆ.

ಭಾರತದ ರಾಮಾಯಣ-ಮಹಾಭಾರತ ಕಾವ್ಯಗಳಲ್ಲಿ, ಪ್ರಾಚೀನ ತತ್ವಜ್ಞಾನ, ಶ್ರೇಷ್ಠ ಕಾವ್ಯ, ಕಲೆ, ಶಿಲ್ಪಕಲೆ ಮತ್ತು ವಾಸ್ತುಶಿಲ್ಪದಲ್ಲಿ ಚೈತನ್ಯಯುಕ್ತವಾಗಿ ಕಾಣುವ ಅಗಾಧ ಬೌದ್ಧಿಕತೆ, ಆಧ್ಯಾತ್ಮಿಕತೆ, ಮತ್ತು ಶ್ರೇಷ್ಠಮಾನವನ ನೈತಿಕ ಬಲವನ್ನು ಹೊಂದಿರುವುದರ

ರಹಸ್ಯವೇನು? ಹೋಲಿಸಲು ಸಾಧ್ಯವಿಲ್ಲದ ಸಾರ್ವಜನಿಕ ಕಾರ್ಯಗಳು ಮತ್ತು ಎಂಜನಿಯರಿಂಗ್ ಕೌಶಲದ ಸಾಧನೆಗಳು, ಸಂಪದ್ಭರಿತ ಹಾಗೂ ಅತಿನಯ ಮತ್ತು ಅತ್ಯಂತ ಸುಂದರವಾದ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳು, ವಿಜ್ಞಾನದ ಅದ್ಭುತ ಸಾಧನಗಳು, ವಿದ್ವತ್ತು, ನ್ಯಾಯಶಾಸ್ತ್ರ, ತರ್ಕ, ತತ್ವಮೀಮಾಂಸೆ, ಅಪೂರ್ವ ಸಾಮಾಜಿಕ ರಚನೆ – ಇವೆಲ್ಲವುಗಳ ಮೂಲದಲ್ಲಿ ಏನಿತ್ತು? ಕ್ಷತ್ರಿಯ, ಸಿಖ್ ಮತ್ತು ರಜಪೂತರ ವೀರತ್ವ ಮತ್ತು ಸ್ವಯಂ-ತ್ಯಾಗಗುಣ, ಅದಮ್ಯವಾದ ರಾಷ್ಟ್ರೀಯ ಚೈತನ್ಯ ಮತ್ತು ಶ್ರಮಸಾಧ್ಯತೆಗಳನ್ನು ಬೆಂಬಲಿಸಿದ್ದು ಯಾವುದು? ತನ್ನ ಬೃಹತ್ ಬಾಹ್ಯರೇಖೆಗಳು ಅಥವಾ ವಿವರಗಳ ಪರಿಪೂರ್ಣತೆಯಲ್ಲಿ ಅಗಾಧವಾದ, ಅದ್ವಿತೀಯವಾದ ನಾಗರಿಕತೆಯ ಹಿಂದೆ ಏನಿತ್ತು? ಆತ್ಮ-ಮನಸ್ಸುಗಳ ಪರಿಪೂರ್ಣ ಶಿಕ್ಷಣವನ್ನು ಒಳಗೊಂಡ ಶ್ರೇಷ್ಠ ಮತ್ತು ಅಪೂರ್ವ ಶಿಸ್ತು ಇಲ್ಲದೆ ಹೋಗಿದ್ದರೆ ಅಪಾರ ಮತ್ತು ನಿರಂತರತೆಯುಳ್ಳ ಈ ಫಲವು ಸಾಧ್ಯವಿರುತ್ತಿರಲಿಲ್ಲ. ಶತಮಾನಗಳಿಂದ ನಮ್ಮವರೆಗೂ ಸಾಗಿಬಂದಿರುವಂತೆ, ಪ್ರಾಚೀನ ಆಶ್ರಮಗಳು ಮತ್ತು ವಿಶ್ವವಿದ್ಯಾಲಯಗಳಲ್ಲಿ ಕೊಡಲಾಗುತ್ತಿದ್ದ ಬೋಧನೆಯ ವಿವರಗಳಲ್ಲಿ ಆರ್ಯರ ಯಶಸ್ಸಿನ ರಹಸ್ಯಕ್ಕಾಗಿ ಹುಡುಕುವುದು ತಪ್ಪಾಗುತ್ತದೆ. ಆ ವಿವರಗಳಿಗೆ ಆಧಾರಪ್ರಾಯವಾಗಿದ್ದ ತತ್ವ ಹಾಗೂ ಮೂಲವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಮಾನವ ಮನಃಶಾಸ್ತ್ರದ ಅಗಾಧ ಜ್ಞಾನ ಮತ್ತು ಬೌದ್ಧಿಕ ತರಬೇತಿ ಹಾಗೂ ಬೋಧನೆಯ ವಿಧಾನಗಳಿಗೆ ಅದರ ಸೂಕ್ಷ್ಮ ಅನ್ವಯಿಕೆಗಳಲ್ಲಿ ಅವರ ಯಶಸ್ಸಿನ ರಹಸ್ಯವನ್ನು ನಾವು ಕಾಣಬಹುದು.

ಪ್ರಾಚೀನ ಆರ್ಯ ವ್ಯವಸ್ಥೆಯ ಮೂಲದಲ್ಲಿ ಇದ್ದುದು ತುಂಬ ಪ್ರಮುಖವಾದ ಬ್ರಹ್ಮಚರ್ಯೆಯ ಶಿಸ್ತು. ಅತ್ಯದ್ಭುತವಾದ ಅಸಾಧಾರಣ ಸಾಮರ್ಥ್ಯದ ಬೌದ್ಧಿಕ ರಚನೆಯನ್ನು ನಿರ್ಮಿಸಲು ಇರುವ ಮೊಟ್ಟ ಮೊದಲ ಅಗತ್ಯವೆಂದರೆ, ಅದನ್ನು ತಾಳಿಕೊಳ್ಳಬಲ್ಲ ಸಶಕ್ತ ಅಡಿಪಾಯವನ್ನು ಹಾಕುವುದು. ಮನುಷ್ಯನ ಬಗ್ಗೆ ಅರೆಕೊರೆ ಜ್ಞಾನವನ್ನಾಧರಿಸಿದ ಶಿಕ್ಷಣ ವ್ಯವಸ್ಥೆಗಳು, ಆಯಾ ಕಾಲದಲ್ಲಿದ್ದ ಮಾನವ ಸಂಸ್ಕೃತಿಯ ಉತ್ತಮ ಭಾಗಗಳನ್ನು ಒಳಗೊಂಡ ವಿವಿಧ ವಿಷಯಗಳ ಕುರಿತು ವಿಶಾಲ ಅಥವಾ ಅತ್ಯುತ್ತಮವಾಗಿ ಆಯ್ಕೆ ಮಾಡಿದ ಮಾಹಿತಿ ರಾಶಿಯನ್ನು ವಿದ್ಯಾರ್ಥಿಗೆ ನೀಡಿ, ತಾವು ತೃಪ್ತಿಕರವಾದ ಅಡಿಪಾಯ ಹಾಕಿದ್ದೇವೆ ಎಂದು ಭಾವಿಸುತ್ತವೆ. ಶಾಲೆಯು ವಸ್ತುಗಳನ್ನು ನೀಡುತ್ತದೆ, ಬಳಸುವುದು ಮಕ್ಕಳಿಗೆ ಬಿಟ್ಟಿದ್ದು - ಇದು ಸೂತ್ರ. ಆದರೆ ಇಲ್ಲಿರುವ ದೋಷವು ಮೂಲಭೂತವಾದದ್ದು. ಮಾಹಿತಿಯು ಜ್ಞಾನದ ಅಡಿಪಾಯ ಆಗಲು ಸಾಧ್ಯವಿಲ್ಲ, ಅದು ವಸ್ತುವಿನ ಒಂದು ಭಾಗವಾಗಿ ಮಾತ್ರ ಇರಬಲ್ಲದು ಮತ್ತು ಅರಿವುಳ್ಳವನು ಅದರಿಂದ ಜ್ಞಾನವನ್ನು ಕಟ್ಟಿಕೊಳ್ಳುತ್ತಾನೆ; ಇದು ಜ್ಞಾನದ ಆರಂಭಿಕ ಬಿಂದುವಾಗಿದ್ದು ನೂತನ ಆವಿಷ್ಕಾರದ ಹಾಗೂ ವಿಸ್ತೃತ ಸೃಷ್ಟಿಯ ಕೇಂದ್ರ. ಕೇವಲ ಜ್ಞಾನ ನೀಡುವುದಕ್ಕೆ ಸೀಮಿತವಾಗಿರುವ ಶಿಕ್ಷಣವು, ಶಿಕ್ಷಣವೇ ಅಲ್ಲ. ಒಬ್ಬ ಜ್ಞಾತನಿಗೆ ವಿಚಾರ ಮತ್ತು ಜ್ಞಾನದ ಸೌಧವನ್ನು ಕಟ್ಟಿಕೊಡುವ ನೆನಪು, ವಿವೇಚನೆ, ಕಲ್ಪನೆ, ಗ್ರಹಿಕೆ, ತಾರ್ಕಿಕತೆಗಳ ವಿವಿಧ ಸಾಮರ್ಥ್ಯಗಳು ಅವುಗಳ ಸೂಕ್ತ ಮತ್ತು ಯಥೇಚ್ಛ ಸಾಧನಗಳು ಹಾಗೂ ವಸ್ತುಗಳೊಂದಿಗೆ ಸಿದ್ಧವಾಗಿರುವುದು ಮಾತ್ರವಲ್ಲ, ಅವು ಹೊಸ ವಿಚಾರಗಳನ್ನು ತರುವುದಕ್ಕೂ, ಈಗಾಗಲೇ ಇರುವಂಥವುಗಳನ್ನು ಹೆಚ್ಚು ಕೌಶಲಪೂರ್ಣವಾಗಿ ಉಪಯೋಗಿಸುವುದಕ್ಕೂ ತರಬೇತಿ ನೀಡುವಂತದ್ದಾಗಿರಬೇಕು. ಅವುಗಳು ರಚಿಸಬೇಕಿರುವ ಸೌಧದ ಅಡಿಪಾಯವು ನಿರಂತರವಾಗಿ ಬೆಳೆಯುತ್ತಿರುವ ಸ್ಮರಣೆ, ವಿವೇಚನೆ ಹಾಗೂ ಸೃಜನಶೀಲ ಶಕ್ತಿಯ ಚಟುವಟಿಕೆಯ ಬೇಡಿಕೆಗಳನ್ನು ಪೂರೈಸಲು ಸಾಕಷ್ಟು ಬಲ ಹಾಗೂ ಶಕ್ತಿಯ ನಿಧಿಯನ್ನು ಮಾತ್ರ ಒದಗಿಸಬಲ್ಲದು. ಆದರೆ ಆ ಶಕ್ತಿಯನ್ನು ಎಲ್ಲಿ ಕಂಡುಕೊಳ್ಳಬಹುದು?

ಮನುಷ್ಯನು ಬ್ರಹ್ಮಾಂಡದಿಂದ ಬೇರೆಯಲ್ಲ; ಅಲೆಯು ಸಮುದ್ರದ ಭಾಗವಾಗಿರುವಂತೆ, ಮನುಷ್ಯನು ಬ್ರಹ್ಮಾಂಡದ ಸಹಜ ಭಾಗ ಎಂಬುದು ಪ್ರಾಚೀನ ಆರ್ಯರಿಗೆ ತಿಳಿದಿತ್ತು. ಅನಂತವಾದ ಶಕ್ತಿ, ಪ್ರಕೃತಿ, ಮಾಯೆ ಅಥವಾ ಶಕ್ತಿಯು ಪ್ರಪಂಚವನ್ನು

ವ್ಯಾಪಿಸಿದೆ, ಪ್ರತಿಯೊಂದು ನಾಮ ಮತ್ತು ರೂಪದಲ್ಲಿ ಸಾಕಾರಗೊಂಡಿದೆ, ಮತ್ತು ಭೂಮಿ, ಸಸ್ಯ, ಕೀಟ, ಪ್ರಾಣಿ, ಮನುಷ್ಯ ಇವೆಲ್ಲವೂ ತಮ್ಮ ಅದ್ಭುತ ಅಸ್ತಿತ್ವದಲ್ಲಿ ಹೆಚ್ಚು ಕಡಮೆ ಕೇವಲ ಈ ಶಕ್ತಿಯ ಪರಿಣಾಮಕಾರಿಯಾದ 'ಆಧಾರ'ಗಳು. ನಾವು ಪ್ರತಿಯೊಬ್ಬರೂ ಒಂದೊಂದು ಅಸಾಧಾರಣ ಶಕ್ತಿ (dynamo), ನಮ್ಮಲ್ಲಿ ಆ ಶಕ್ತಿಯ ಅಲೆಗಳನ್ನು ಸೃಷ್ಟಿಸಿ ಸಂಗ್ರಹಿಸಲಾಗಿದೆ, ನಿರಂತರವಾಗಿ ಸಂರಕ್ಷಿಸಿ, ಬಳಸಿ ಮರು ಪೂರಣ ಮಾಡಲಾಗಿದೆ. ನಕ್ಷತ್ರ ಗ್ರಹಗಳಲ್ಲಿ ಹರಿಯುವ ಶಕ್ತಿಯೇ ನಮ್ಮೊಳಗೂ ಹರಿಯುತ್ತಿದೆ; ನಮ್ಮ ಎಲ್ಲ ವಿಚಾರಗಳು ಮತ್ತು ಕ್ರಿಯೆಗಳು ಆ ಶಕ್ತಿಯ ಕ್ರಿಯಾಕಲಾಪಗಳ ಸಂಕೀರ್ಣತೆಯಿಂದ ಹುಟ್ಟಿದ ಕಾರ್ಯಗಳಷ್ಟೇ. ಮನುಷ್ಯನು ಒಂದು 'ಆಧಾರ' ವಾಗಿ ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವ ಕೆಲವು ಪ್ರಕ್ರಿಯೆಗಳಿವೆ. ತನ್ನ ಮತ್ತು ಬ್ರಹ್ಮಾಂಡದ ಶಕ್ತಿಯ ನಡುವಿನ ಸಂವಹನದ ದಾರಿಗೆ ಅಡ್ಡವಾಗಿರುವ ಅಡೆತಡೆಗಳನ್ನು ತೆಗೆದುಹಾಕುವ ಮತ್ತು ಆ ಶಕ್ತಿಯ ಹೆಚ್ಚು ಅತ್ಯುತ್ತಮ ಸಂಗ್ರಹವನ್ನು ಅವನ ಆತ್ಮ, ಮೆದುಳು ಮತ್ತು ದೇಹದಲ್ಲಿ ಹರಿಯುವ ಇತರೇ ಕೆಲವು ಪ್ರಕ್ರಿಯೆಗಳಿವೆ. ಈ 'ಆಧಾರ' ದ ನಿರಂತರ ಸುಧಾರಣೆ ಮತ್ತು ಮಾಹಿತಿ ನೀಡುವ ಆ ಶಕ್ತಿಯ ಕ್ರಿಯೆಯ ಪ್ರಮಾಣ ಮತ್ತು ಸಂಕೀರ್ಣತೆಯಲ್ಲಿನ ಹೆಚ್ಚಳವು ವಿಕಾಸದ ಏಕೈಕ ಉದ್ದೇಶವಾಗಿರುತ್ತದೆ. ಮನುಷ್ಯನ 'ಆಧಾರ' ಸಾಮರ್ಥ್ಯಕ್ಕನುಗುಣವಾಗಿ ಆ ಶಕ್ತಿಯು ತನ್ನ ಸ್ವಭಾವದಲ್ಲಿ ಔನ್ನತ್ಯದಲ್ಲಿದ್ದಾಗ ಮತ್ತು ಪೂರ್ಣ ಪ್ರಮಾಣದಲ್ಲಿದ್ದಾಗ, ಆ ಶಕ್ತಿಯ ಒಳಹರಿವು ಮತ್ತು ಅದರ ಕ್ರಿಯೆಯನ್ನು ಹೊರಲು ಸ್ವತಃ 'ಆಧಾರ' ವು ತರಬೇತಿ ಹೊಂದಿದಾಗ, ಅಂಥ ಮನುಷ್ಯ ಒಬ್ಬ ಸಿದ್ಧ, ಸಂತೃಪ್ತ ಅಥವಾ ಪರಿಪೂರ್ಣ ಮನುಷ್ಯನಾಗಿರುತ್ತಾನೆ; ಇವನ ವಿಕಾಸವು ಪೂರ್ಣಗೊಂಡಿರುತ್ತದೆ ಹಾಗೂ ಕಾಲಕಾಲಾಂತರದಿಂದ ಮಾನವಕುಲವು ಸಾಧಿಸಲು ಶ್ರಮಿಸುತ್ತಿರುವ ಆ ಬೆಳವಣಿಗೆಯ ಪರಾಕಾಷ್ಠೆಯು ಈ ವ್ಯಕ್ತಿಯಲ್ಲಿ ಪೂರ್ಣಗೊಂಡಿರುತ್ತದೆ.

ಈ ಸಿದ್ಧಾಂತವು ಸರಿಯಿರುವುದಾದರೆ, ಜ್ಞಾನದ ಕ್ರಿಯಾತ್ಮಕತೆಯ ಮೂಲದಲ್ಲಿರುವ ಶಕ್ತಿಯು ನಮ್ಮೊಳಗೆ ಇರಲೇಬೇಕು; ಮತ್ತದು ಹೆಚ್ಚುಕಡಮೆ ಅಸೀಮವಾದ ಹೆಚ್ಚಿನ ವಿಸ್ತರಣೆಗೆ ಮತ್ತು ಯಥೇಷ್ಟ ಬಳಕೆಗೆ ಸಾಧ್ಯವಿರಬೇಕು. ಮತ್ತು ಇದು ಕೂಡ ಉತ್ತಮ ತತ್ವವಾಗಿರಬೇಕು, ಆ ಶಕ್ತಿಯನ್ನು ನಾವು ಹೆಚ್ಚು ಮಾಡಿಕೊಂಡಷ್ಟು, ಶ್ರೀಮಂತಗೊಳಿಸಿದಷ್ಟು, ನಮ್ಮ ಮನಸ್ಸಿನ ಕಾರ್ಯಗಳ ಸಂಭಾವ್ಯ ವ್ಯಾಪ್ತಿ, ಶಕ್ತಿ ಮತ್ತು ಚಟುವಟಿಕೆಗಳು ಅಸಾಧಾರಣವಾಗಿದ್ದು ಅದರ ಪರಿಣಾಮವಾಗಿ ನಮ್ಮ ಬೌದ್ಧಿಕತೆಯ ಕ್ರಿಯಾಶೀಲತೆ ಮತ್ತು ಸಾಧನೆಯ ಔನ್ನತ್ಯವು ಅಸಾಧಾರಣವಾಗಿರುವ ಸಾಧ್ಯತೆ ಇರುತ್ತದೆ. ಇದು ಪ್ರಾಚೀನ ಆರ್ಯರು ಆಧರಿಸಿದ ಶಿಕ್ಷಣದ ಮೊದಲ ತತ್ವವಾಗಿತ್ತು ಮತ್ತು ಹೆಚ್ಚಿನ ಶಕ್ತಿಯ ಸಂಗ್ರಹಕ್ಕಾಗಿ ಅವರು ಬಳಸಿದ ಪ್ರಧಾನ ಪ್ರಕ್ರಿಯೆಯೆಂದರೆ ಅದು ಬ್ರಹ್ಮಚರ್ಯೆಯ ಅಭ್ಯಾಸವಾಗಿತ್ತು.

# III

ಆಂತರಿಕ ಶಕ್ತಿಯನ್ನು ಉದ್ದೀಪನಗೊಳಿಸಲು ಹಾಗೂ ಅದನ್ನು ಹೊಂದಿದವನ ಅಥವಾ ಮಾನವಕುಲದ ಒಳಿತಾಗಿ ಅದನ್ನು ಉಪಯೋಗಿಸಲು ಇರುವ ಮೊಟ್ಟ ಮೊದಲ ಹಾಗೂ ಬಹು ಅಗತ್ಯ ಸ್ಥಿತಿಯೆಂದರೆ ಬ್ರಹ್ಮಚರ್ಯ ಅಭ್ಯಾಸ ಮಾಡುವುದು. ಮಾನವನ ಎಲ್ಲ ಶಕ್ತಿಯು ಭೌತಿಕ ಅಡಿಪಾಯವನ್ನು ಹೊಂದಿದೆ. ಯುರೋಪಿನ ಭೌತಿಕವಾದದಿಂದಾದ ತಪ್ಪು ಏನೆಂದರೆ ಅಡಿಪಾಯವೇ ಎಲ್ಲವೂ ಎಂದು ಭಾವಿಸಿದ್ದು ಮತ್ತು ಅದನ್ನು ಮೂಲವೆಂದು ತಪ್ಪಾಗಿ ಭಾವಿಸಿದ್ದು. ಜೀವ ಹಾಗೂ ಶಕ್ತಿಯ ಮೂಲ ಭೌತಿಕವಲ್ಲ, ಆಧ್ಯಾತ್ಮಿಕ. ಆದರೆ ಜೀವ ಮತ್ತು ಶಕ್ತಿಯು ನಿಂತಿರುವ ಮತ್ತು ಕಾರ್ಯಪ್ರವೃತ್ತವಾಗಿರುವುದರ ನೆಲೆಯು ಭೌತಿಕವಾಗಿದೆ. ಪ್ರಾಚೀನ ಹಿಂದೂಗಳು ಅಸ್ತಿತ್ವದ ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವಗಳಾಗಿರುವ 'ಕಾರಣ' ಮತ್ತು `ಪ್ರತಿಷ್ಠಾ'ದ ನಡುವೆ ಇರುವ ವ್ಯತ್ಯಾಸವನ್ನು ಬಹು ಸ್ಪಷ್ಟವಾಗಿ ಗುರುತಿಸಿದ್ದರು. ಪೃಥ್ವಿ ಅಥವಾ ಒಟ್ಟು ವಸ್ತು `ಪ್ರತಿಷ್ಠಾ', ಬ್ರಹ್ಮನ್ ಅಥವಾ ಚೇತನವು `ಕಾರಣ' ಎಂದೂ ಗುರುತಿಸಲಾಗಿದ್ದಿತು. ಭೌತಿಕತೆಯನ್ನು ಆಧ್ಯಾತ್ಮಿಕ ಮಟ್ಟಕ್ಕೆ ಕೊಂಡೊಯ್ಯುವುದು ಬ್ರಹ್ಮಚರ್ಯ, ಏಕೆಂದರೆ ಇವೆರಡರ ಮಿಲನದಿಂದಾಗಿ ಒಂದರಿಂದ ಆರಂಭವಾಗಿ ಇನ್ನೊಂದನ್ನು ಸೃಷ್ಟಿಸುವ ಶಕ್ತಿಯು ಬಲಗೊಳ್ಳುತ್ತದೆ ಅಲ್ಲದೇ ಸ್ವತಃ ತನ್ನನ್ನು ಪೂರೈಸಿಕೊಳ್ಳುತ್ತದೆ.

ಇದು ತತ್ತ್ವಮೀಮಾಂಸೆಯ ಸಿದ್ಧಾಂತ. ಇದರ ಅನ್ವಿಕೆಯು ಮನುಷ್ಯನ ಶಕ್ತಿ ಭಂಡಾರದ ಭೌತಿಕ ಮತ್ತು ಮಾನಸಿಕ ರಚನೆಗನುಗುಣವಾಗಿ ಸರಿಯಾದ ತಿಳುವಳಿಕೆಯ ಮೇಲೆ ಅವಲಂಬಿತವಾಗಿರುತ್ತದೆ. ಮೂಲಭೂತ ಭೌತಿಕ ಘಟಕವು 'ರೇತಸ್', ಅದರಲ್ಲಿ 'ತೇಜಸ್', ಮಾನವನಲ್ಲಿನ ಉತ್ತೇಜಕ, ಬೆಳಕು ಮತ್ತು ವಿದ್ಯುಚ್ಛಕ್ತಿಗಳನ್ನು ಒಳಗೊಂಡಿರುತ್ತದೆ ಮತ್ತು ಅಡಗಿರುತ್ತದೆ. 'ರೇತಸ್'ನಲ್ಲಿ ಎಲ್ಲ ಶಕ್ತಿಯು ಸುಪ್ತವಾಗಿರುತ್ತದೆ. ಈ ಶಕ್ತಿಯನ್ನು ಭೌತಿಕವಾಗಿ ವ್ಯಯಿಸಬಹುದು ಅಥವಾ ವ್ಯಯಿಸದೆ ಸಂರಕ್ಷಿಸಬಹುದು. ಎಲ್ಲ ಭಾವೋದ್ರೇಕಗಳು, ಭೋಗಾಪೇಕ್ಷೆ ಮತ್ತು ಆಸೆಯು ಮಂದ ಅಥವಾ ಉದಾತ್ತೀಕರಿಸಿದ ಸೂಕ್ಷ್ಮ ರೂಪದಲ್ಲಿ ದೇಹದಿಂದ ಹೊರಹೋಗಿ ಶಕ್ತಿಯನ್ನು ಹಾಳುಗೆಡವುತ್ತದೆ. ಅನೈತಿಕ ಕ್ರಿಯೆಯು ಅದನ್ನು ಮಂದ ರೂಪದಲ್ಲಿ ಹೊರಗೆಸೆದರೆ, ಅನೈತಿಕ ವಿಚಾರವು ಅದನ್ನು ಸೂಕ್ಷ್ಮ ರೂಪದಲ್ಲಿ ಹೊರಗೆಸೆಯುತ್ತದೆ. ಎರಡೂ ಸನ್ನಿವೇಶದಲ್ಲೂ ಇದು ಹಾಳು ಹಾಗೂ ಮನಸ್ಸಿನ, ಮಾತಿನ ಹಾಗೂ ದೇಹದ ವಿಷಯದಲ್ಲೂ ಪರಿಶುದ್ಧವಾಗಿರುವುದಿಲ್ಲ. ಇನ್ನೊಂದೆಡೆ, ಎಲ್ಲ ಸ್ವ-ನಿಯಂತ್ರಣವು ಶಕ್ತಿಯನ್ನು 'ರೇತಸ್ಸಿನಲ್ಲಿ' ಸಂರಕ್ಷಿಸುತ್ತದೆ. ಈ ಸಂರಕ್ಷಣೆ ಯಾವಾಗಲೂ ಶಕ್ತಿಯನ್ನು ಹೆಚ್ಚಿಸುತ್ತದೆ. ಆದರೆ, ಭೌತ ಶರೀರದ ಅಗತ್ಯಗಳು ಸೀಮಿತವಾಗಿರುತ್ತವೆ ಮತ್ತು ಹೆಚ್ಚಿನ ಪ್ರಮಾಣದ ಶಕ್ತಿಯು ಅಧಿಕ್ಯ(surplus)ದಲ್ಲಿ ಪರಿಣಮಿಸಲೇಬೇಕು; ಇದು ಭೌತಿಕವಲ್ಲದ ಬೇರೆ ಯಾವುದಾದರೂ ಪ್ರಯೋಜನಕ್ಕೆ ಪರಿವರ್ತಿತವಾಗಬೇಕು. ಪ್ರಾಚೀನ ಸಿದ್ಧಾಂತದ ಪ್ರಕಾರ 'ರೇತಸ್' ಎಂಬುದು ಜಲ ಅಥವಾ ನೀರು; ಅದು ಬೆಳಕು, ಉತ್ತೇಜಕ ಹಾಗೂ ವಿದ್ಯುಚ್ಛಕ್ತಿಯನ್ನು ಹೊಂದಿರುತ್ತದೆ. ಒಂದೇ ಪದದಲ್ಲಿ ಹೇಳುವುದಾದರೆ ಅದು 'ತೇಜಸ್' ಆಗಿರುತ್ತದೆ. ಹೆಚ್ಚಿನ 'ರೇತಸ್' ಮೊದಲು ಇಡೀ ವ್ಯವಸ್ಥೆಯನ್ನು ಪ್ರಚೋದಿಸುವ ಉತ್ತೇಜಕ ಅಥವಾ 'ತಪಸ್' ಆಗಿ ಪರಿವರ್ತಿತವಾಗುತ್ತದೆ. ಈ ಕಾರಣಕ್ಕಾಗಿ ಎಲ್ಲ ರೀತಿಯ ಸ್ವ-ನಿಯಂತ್ರಣಗಳು ಹಾಗೂ ಸಂಯಮಗಳನ್ನು 'ತಪಸ್' ಅಥವಾ 'ತಪಸ್ಯಾ' ಎಂದು ಕರೆಯಲಾಗುತ್ತದೆ. ಏಕೆಂದರೆ ಅವು ಶಕ್ತಿಯುತ ಕ್ರಿಯೆ ಮತ್ತು ಯಶಸ್ಸುಗಳ ಮೂಲವಾಗಿರುವ ಉತ್ತೇಜಕ ಅಥವಾ ಪ್ರಚೋದಕವನ್ನು ಉಂಟುಮಾಡುತ್ತದೆ; ಎರಡನೆಯದಾಗಿ, ಅದು ಎಲ್ಲ ಜ್ಞಾನಗಳ ಮೂಲದಲ್ಲಿರುವ ಶಕ್ತಿಯಾದ 'ತೇಜಸ್' ಅರ್ಥಾತ್ ಬೆಳಕಾಗಿ ಪರಿವರ್ತಿತವಾಗುತ್ತದೆ; ಮೂರನೆಯದಾಗಿ, ಬೌದ್ಧಿಕವೇ ಆಗಿರಲಿ ಭೌತಿಕವೇ ಆಗಿರಲಿ

ಶಕ್ತಿಯುತ ಕ್ರಿಯೆಯ ಮೂಲದಲ್ಲಿರುವ 'ವಿದ್ಯುತ್ತಾಗಿ' ಪರಿವರ್ತಿತವಾಗುತ್ತದೆ. ಈ 'ವಿದ್ಯುತ್ತಿನಲ್ಲಿ, ಮೂಲ ಶಕ್ತಿಯಾಗಿರುವ ನಿರ್ಮಲಾಕಾಶದಿಂದ ಪ್ರವಹಿಸುವ 'ಓಜಸ್' ಅಥವಾ 'ಪ್ರಾಣಶಕ್ತಿ' ಇರುತ್ತದೆ. 'ರೇತಸ್ಸು' ಜಲದಿಂದ 'ತಪಸ್', 'ತೇಜಸ್' ಮತ್ತು 'ವಿದ್ಯುತ್', ಆ 'ವಿದ್ಯುತ್ತಿನಿಂದ' 'ಓಜಸ್' ಆಗಿ ಸಂಸ್ಕರಣಗೊಂಡು, ದೈಹಿಕ ಬಲವಾಗಿ, ಮೆದುಳಿನ ಶಕ್ತಿಯಾಗಿ ವ್ಯವಸ್ಥೆಯನ್ನು ತುಂಬುತ್ತದೆ, ಮತ್ತು ಅದರ ಕೊನೆಯ ರೂಪದಲ್ಲಿ 'ಓಜಸ್' ಆಗಿ, ವಸ್ತುವಿನ ಅತ್ಯಂತ ಸಂಸ್ಕರಿತ ರೂಪ ಮತ್ತು ಚೈತನ್ಯಕ್ಕೆ ಅತ್ಯಂತ ಹತ್ತಿರವಾಗಿರುವ ಮೆದುಳನ್ನು ಮೂಲಭೂತ ಶಕ್ತಿಯಿಂದ ವ್ಯಾಪಿಸುತ್ತದೆ. ಆಧ್ಯಾತ್ಮಿಕ ಶಕ್ತಿ ಅಥವಾ 'ವೀರ್ಯ' ವನ್ನು ಸೃಷ್ಟಿಸುವುದು ಈ 'ಓಜಸ್', ಆ ಮೂಲಕ ಮನುಷ್ಯನು ಆಧ್ಯಾತ್ಮಿಕ ಜ್ಞಾನ, ಆಧ್ಯಾತ್ಮಿಕ ಪ್ರೀತಿ ಮತ್ತು ನಂಬಿಕೆ, ಆಧ್ಯಾತ್ಮಿಕ ಬಲವನ್ನು ಗಳಿಸುತ್ತಾನೆ. ಅರ್ಥಾತ್ ಹೆಚ್ಚಿದ ಬ್ರಹ್ಮಚರ್ಯದಿಂದ 'ತಪಸ್', 'ತೇಜಸ್', 'ವಿದ್ಯುತ್' ಹಾಗೂ 'ಓಜಸ್' ಗಳನ್ನು ಹೆಚ್ಚಿಸಲು ಸಾಧ್ಯವಾದರೆ ದೇಹ, ಹೃದಯ, ಮನಸ್ಸು ಮತ್ತು ಚೈತನ್ಯದ ಕ್ರಿಯೆಗಳಿಗೆ ಅಗತ್ಯವಿರುವ ಸಂಪೂರ್ಣ ಶಕ್ತಿಯನ್ನು ನಮ್ಮಲ್ಲಿ ತುಂಬಿಸಿಕೊಳ್ಳಬಹುದು.

ಮನುಷ್ಯನ ಆತ್ಮದ ಬಗೆಗಿನ ಈ ದೃಷ್ಟಿಕೋನವಷ್ಟೇ ಪ್ರಾಚೀನ ಹಿಂದೂ ಧರ್ಮವು ತನ್ನ ಶೈಕ್ಷಣಿಕ ಶಿಸ್ತನ್ನು ಕಟ್ಟಿಕೊಳ್ಳಲು ಆಧರಿಸಿದ ಒಟ್ಟು ಜ್ಞಾನವಲ್ಲ. ಇದರ ಜೊತೆಗೆ ಎಲ್ಲ ಜ್ಞಾನವು ನಮ್ಮೊಳಗೆ ಇದೆ ಮತ್ತು ಅದನ್ನು ಹೊರಗಿನಿಂದ ಕ್ರಮೇಣವಾಗಿ ತುಂಬುವ ಬದಲು, ಶಿಕ್ಷಣದ ಮೂಲಕ ಪ್ರಚೋದಿಸಬೇಕು ಎಂಬ ದೃಷ್ಟಿಕೋನವೂ ಅದಕ್ಕಿದ್ದಿತು. ಮನುಷ್ಯನ ಸಂರಚನೆಯು ಸಾರ್ವತ್ರಿಕ ಕ್ರಿಯೆಯ ಸಮಗ್ರ, ಕ್ರಿಯಾಶೀಲ ಮತ್ತು ನಿಷ್ಕ್ರಿಯ ಅಂಶಗಳಾದ 'ಸತ್ವ,' 'ರಜಸ್' ಹಾಗೂ 'ತಮಸ್' ಎಂಬ ಮೂರು ತತ್ವಗಳನ್ನು ಒಳಗೊಂಡಿದ್ದು, ಅವುಗಳ ಸಹಸ್ರಮುಖಿ ರೂಪಗಳಲ್ಲಿ ಒಂದಾದ ಜ್ಞಾನ, ತೀವ್ರಾಸಕ್ತಿ ಮತ್ತು ಮೌಢ್ಯವಾಗಿ ಮೈದಳೆಯುತ್ತದೆ. 'ತಮಸ್' ಸ್ವಭಾವತಃ ಮಂದವಾಗಿ ಅಥವಾ ನಿಷ್ಕ್ರಿಯವಾಗಿದ್ದು ಒಳಗಿನಿಂದಲೇ ಜ್ಞಾನವನ್ನು ಮಂಕುಗೊಳಿಸಿ ಅಜ್ಞಾನ, ಮನೋ ಆಲಸ್ಯ, ಮಂದಗತಿ, ಮರೆವು, ಅಧ್ಯಯನದಲ್ಲಿ ನಿರಾಸಕ್ತಿ, ಗ್ರಹಿಕೆ ಮತ್ತು ವಿಶಿಷ್ಟತೆಯನ್ನು ಗುರುತಿಸುವ ಅಸಾಮರ್ಥ್ಯಗಳನ್ನು ಹುಟ್ಟುಹಾಕುತ್ತದೆ. 'ರಜಸ್ಸು' ಅಶಿಸ್ತಿನ ಚಟುವಟಿಕೆಯಾಗಿದ್ದು ಇದು ಭಾವೋದ್ರೇಕ, ಮೋಹ, ಪೂರ್ವಾಗ್ರಹ, ಪಕ್ಷಪಾತ ಹಾಗೂ ತಪ್ಪುಕಲ್ಪ ವಿಚಾರಗಳಿಂದ ಜ್ಞಾನವನ್ನು ಅಸ್ಪಷ್ಟಗೊಳಿಸುತ್ತದೆ. 'ಸತ್ವ' ವು ಪ್ರಕಾಶವಾಗಿದ್ದು ಇದು ಅಡಗಿದ ಜ್ಞಾನವನ್ನು ಬಯಲು ಮಾಡಿ, ಅರಿವಿಗೆ ತಂದು ಅವಲೋಕನವು ಗ್ರಹಿಸುವಂತೆ, ನೆನಪು ದಾಖಲಿಸುವಂತೆ ಮಾಡುತ್ತದೆ. ಅರಿಯುವ ಸಾಮರ್ಥ್ಯದ ಈ ಸಂರಚನಾ ಪರಿಕಲ್ಪನೆಯು 'ತಮಸ್' ಅನ್ನು ತೆಗೆದುಹಾಕುವ, 'ರಜಸ್ಸನ್ನು' ಶಿಸ್ತಿಗೆ ಒಳಪಡಿಸುವ ಮತ್ತು 'ಸತ್ವ' ವನ್ನು ಎಚ್ಚರಗೊಳಿಸುವ ಜವಾಬ್ದಾರಿಯನ್ನು ಶಿಕ್ಷಕನದ್ದಾಗಿಸಿತ್ತು. ಒಳಗಿನಿಂದ ಬೆಳಕನ್ನು ಗ್ರಹಿಸಲು ಶಿಕ್ಷಕನು ವಿದ್ಯಾರ್ಥಿಯನ್ನು ತರಬೇತುಗೊಳಿಸಬೇಕಿತ್ತು. ಬೌದ್ಧಿಕ ಮೊಂಡುತನ, ಅಹಂಕಾರ ಮತ್ತು ಭಾವೋದ್ರೇಕಗಳ ಮಂಕುತನದಿಂದ ಮುಕ್ತಿ ಹೊಂದಿದ ಶಾಂತ, ಸ್ಪಷ್ಟ, ಕಲಿಯುವ ಮನಸ್ಥಿತಿಯನ್ನು ಪ್ರೇರೇಪಿಸುವಂಥ ಕಟ್ಟುನಿಟ್ಟಿನ ನೈತಿಕ ಶಿಸ್ತನ್ನು ಅನುಸರಿಸುವಂತೆ ಮಾಡುವುದರ ಮೂಲಕ 'ರಜಸ್ಸನ್ನು' ಶಿಸ್ತಿಗೊಳಪಡಿಸಲಾಗುತ್ತಿತ್ತು - ಇದು ಆರ್ಯ ಸಂಸ್ಕೃತಿ ಮತ್ತು ಆರ್ಯ ನೀತಿಗಳ ಅಡಿಪಾಯವಾಗಿದ್ದ 'ಬ್ರಹ್ಮಚಾರಿಯ' ಅತ್ಯುತ್ತಮ ಶಿಸ್ತಾಗಿತ್ತು; ಮತ್ತು ಕಲಿಯುವ ಅವಧಿಯಲ್ಲಿ ವಿದ್ಯಾರ್ಥಿಗೆ ಈಗಾಗಲೇ ಮನುಷ್ಯನಲ್ಲಿದ್ದ ದೃಢಪಡಿಸಿದ ಜ್ಞಾನ ಅಥವಾ ಸಮರ್ಪಕ ವಿಚಾರಗಳನ್ನು ಆತನಿಗೆ ವಿವರಿಸಿ, ಬಾಯಿಪಾಠ ಮಾಡಿಸಿ ಮಾನಸಿಕವಾಗಿ ಶಿಕ್ಷಕನಿಗೆ ಕಟ್ಟುನಿಟ್ಟಿನಿಂದ ವಿಧೇಯನಾಗಿರುವುದರ ಮೂಲಕ ತಪ್ಪು ವಿಚಾರಗಳು ಮಧ್ಯ ಪ್ರವೇಶಿಸುವುದನ್ನು ತಡೆಯಲಾಗುತ್ತಿತ್ತು. ನೈತಿಕ ಶುದ್ಧತೆಯಿಂದ ವ್ಯವಸ್ಥೆಯಲ್ಲಿ 'ತೇಜಸ್ಸಿನ' ಶಕ್ತಿ ಹಾಗೂ ವಿದ್ಯುಚ್ಛಕ್ತಿಯನ್ನು ಎಚ್ಚರಗೊಳಿಸುವ ಮೂಲಕ ಹಾಗೂ 'ತಪಸ್ಸಿನ' ಶಕ್ತಿಯಿಂದ ಅದನ್ನು ಮನೋಬಲದ ಮತ್ತು ಸ್ಪಷ್ಟತೆಗಳ ಭಂಡಾರವಾಗಿರಲು ತರಬೇತುಗೊಳಿಸುವ ಮೂಲಕ 'ತಮಸ್ಸನ್ನು' ಹೋಗಲಾಡಿಸುವಂತೆ ಮಾಡಲಾಗುತ್ತಿತ್ತು. ಪುನರಾವರ್ತನೆ, ಧ್ಯಾನ ಮತ್ತು ಚರ್ಚೆ – ಈ ಮುಮ್ಮಡಿ ವಿಧಾನದಿಂದ

ಅರಿವನ್ನು ಅತ್ಯಂತ ಕ್ರಿಯಾಶೀಲವಾಗಿ ಜಾಗೃತಗೊಳಿಸಲಾಗುತ್ತಿತ್ತು. ‘ಅರ್ಥ’ವು ಸ್ವತಃ ಒಳಗಿನಿಂದಲೇ ಹುಟ್ಟಿಕೊಳ್ಳಲೆಂದು ಮನಸ್ಸಿನ ನೆನಪಿನಲ್ಲಿಟ್ಟುಕೊಳ್ಳುವ ಭಾಗವನ್ನು ‘ಶಬ್ದ’ ಅಥವಾ ಪದದಿಂದ ತುಂಬಿ ‘ಆವೃತ್ತಿ’ ಅಥವಾ ಪುನರಾವರ್ತನೆಯನ್ನು ಮಾಡಲಾಗುತ್ತಿತ್ತು. ಯಾಂತ್ರಿಕ ಪುನರಾವರ್ತನೆಯಿಂದ ಈ ಪರಿಣಾಮವನ್ನು ಉಂಟುಮಾಡುವ ಸಾಧ್ಯತೆ ಖಂಡಿತ ಇಲ್ಲ ಎಂದು ಹೇಳುವ ಅಗತ್ಯವೇ ಇಲ್ಲ. ಇನ್ನೂ ಪ್ರಾಚೀನ ಭಾರತೀಯರು ‘ಧ್ಯಾನ’ ಎಂದು ಕರೆಯುತ್ತಿದ್ದ ಸುಸ್ಪಷ್ಟ ನಿಶ್ಚಲ ಗ್ರಹಿಸುವಿಕೆ ಮತ್ತು ಮನಸ್ಸಿನ ಚಿಂತನಾಶೀಲ ಭಾಗದ ಮೂಲಕ ಸಾವಧಾನತೆಯಿಂದ ಪದಗಳನ್ನು ಅಥವಾ ವಿಷಯಗಳನ್ನು ತೂಗಿ ಗ್ರಹಿಸುವುದು ಇರಲೇಬೇಕು. ಭಾಷೆಯೊಂದನ್ನು ಕಲಿಯುತ್ತಿದ್ದಾಗ, ಪಠ್ಯವೊಂದನ್ನು ಅರ್ಥ ಮಾಡಿಕೊಳ್ಳಲು ಹೆಣಗುತ್ತಿದ್ದಾಗ ಪರಿಹರಿಸಲಾಗದು ಎಂದು ಭಾವಿಸಿದ ಕಷ್ಟಗಳು ಎದುರಾದಾಗ, ಪುಸ್ತಕವನ್ನು ನಮ್ಮ ಮನಸ್ಸಿನಿಂದ ಸ್ವಲ್ಪಹೊತ್ತು ಹೊರಗಿಟ್ಟಾಗ ಪುಸ್ತಕ ಅಥವಾ ಶಿಕ್ಷಕರ ಸಹಾಯವಿಲ್ಲದೇ, ಅವು ತಂತಾನೆ ಇದ್ದಕ್ಕಿದ್ದಂತೆ ಕರಗಿ ಸ್ಪಷ್ಟವಾದ ಅರ್ಥವು ಹುಟ್ಟಿಕೊಳ್ಳುತ್ತಿದ್ದುದನ್ನು ನಾವೆಲ್ಲ ಅನುಭವಿಸಿದ್ದೇವೆ. ಇದಲ್ಲದೇ, ಸ್ವಲ್ಪ ಸಮಯದ ಬಿಡುವಿನ ಬಳಿಕ ಒಂದು ಭಾಷೆ ಅಥವಾ ವಿಷಯವನ್ನು ಮತ್ತೆ ತೆಗೆದುಕೊಂಡಾಗ ನಾವು ಈ ಮೊದಲು ಅದನ್ನು ತೆಗೆದುಕೊಂಡಾಗ ಅರ್ಥಮಾಡಿಕೊಂಡದಕ್ಕಿಂತ ಉತ್ತಮವಾಗಿ ಅರ್ಥಮಾಡಿಕೊಂಡಿರುವುದನ್ನು, ನಾವು ಈ ಹಿಂದೆ ಎಂದೂ ಗ್ರಹಿಸದ ಪದಗಳ ಅರ್ಥವನ್ನು ಗ್ರಹಿಸುವುದನ್ನು, ಮತ್ತು ಅಧ್ಯಯನವನ್ನು ಸ್ವಲ್ಪ ಕಾಲ ಸ್ಥಗಿತಗೊಳಿಸುವ ಮುನ್ನ ನಮ್ಮ ತಿಳುವಳಿಕೆಯನ್ನು ದಿಗ್ಭ್ರಮೆಗೊಳಿಸಿದ ವಾಕ್ಯಗಳನ್ನು ವಿವರಿಸಲು ಸಾಧ್ಯವಾದ ವಿಚಿತ್ರ ಅನುಭವ ನಮ್ಮೆಲ್ಲರಿಗೂ ಆಗಿದೆ. ಹೀಗಾಗಲು ಕಾರಣ ನಮ್ಮೊಳಗಿನ ‘ಜ್ಞಾತಾ’ ಅಥವಾ ಮನಸ್ಸಿನ ಗಮನವು ವಿಷಯದ ಮೇಲೆ ಕೇಂದ್ರಿಕರಿಸಲ್ಪಡಲಾಗಿದ್ದು ಮಧ್ಯಂತರದಲ್ಲಿ ಅದಕ್ಕೆ ಸಂಬಂಧಿಸಿದಂತೆ ತನ್ನೊಳಗಿನ ಜ್ಞಾನದ ಮೂಲವನ್ನು ಬಳಸುವುದರಲ್ಲಿ ನಿರತವಾಗಿರುತ್ತದೆ. ಸಾತ್ವಿಕ ಅಥವಾ ಪ್ರಕಾಶಮಾನಗೊಂಡ ಅಂಶವಾದ ಜ್ಞಾನವು ಶಕ್ತಿಯುತವಾಗಿ ಜಾಗೃತಗೊಂಡವರಲ್ಲಿ ಅಥವಾ ಬೌದ್ಧಿಕ ಸೋಪಜ್ಞತೆ ಮತ್ತು ಆಳವಾದ ಅಧ್ಯಯನ ಮಾಡುವ ಅಭ್ಯಾಸದಿಂದ ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾತವಾಗಿ ಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ತರಬೇತಿ ಹೊಂದಿರುವವರಲ್ಲಿ ಮಾತ್ರ ಈ ಅನುಭವ ಸಾಧ್ಯ. ಸಾತ್ವಿಕ ಬೆಳವಣಿಗೆಯು ಔನ್ನತ್ಯ ತಲುಪುವ ಬಿಂದುವೆಂದರೆ ಅನೇಕ ವೇಳೆ ಅಥವಾ ರೂಢಿಯಾಗಿ ಒಂದು ವಿಷಯವನ್ನು ಶಿಕ್ಷಕ ಅಥವಾ ಪಠ್ಯಪುಸ್ತಕ, ವ್ಯಾಕರಣ ಮತ್ತು ನಿಘಂಟುಗಳಂತಹ ಹೊರಗಿನ ಸಹಾಯವಿಲ್ಲದೆಯೇ ಬಹುಭಾಗ ಅಥವಾ ಸಂಪೂರ್ಣವಾಗಿ ತನ್ನ ಒಳಗಿನಿಂದ ಜ್ಞಾನದಿಂದ ಅರಿಯುವುದು. ಆದರೆ ಇದು ಯೋಗಶಾಸ್ತ್ರವನ್ನು ಯಶಸ್ವಿಯಾಗಿ ಕಲಿತ ಯೋಗಿಗೆ ಮಾತ್ರ ಸಾಧ್ಯ.

# IV

ಪ್ರಾಚೀನ ಭಾರತೀಯರ ಶಿಕ್ಷಣ ಯೋಜನೆಯು ಆಧರಿಸಿದ್ದ ಪ್ರಮುಖ ಮನೋವೈಜ್ಞಾನಿಕ ತತ್ವಗಳನ್ನು ಸ್ಪಷ್ಟತೆಗೆ ಅನುಗುಣವಾಗಿ ಸಂಕ್ಷಿಪ್ತವಾಗಿ ಪ್ರತಿಪಾದಿಸಿದ್ದೇವೆ. ಬ್ರಹ್ಮಚರ್ಯವನ್ನು ಅಭ್ಯಾಸ ಮಾಡುವ ಮೂಲಕ ಅವರು ವ್ಯವಸ್ಥೆಯ ಸಾಮರ್ಥ್ಯದ ಎಲ್ಲ ಶಕ್ತಿಯನ್ನು ಶಾರೀರಿಕ ಕಾರ್ಯಗಳಿಂದ ಬಿಡುಗಡೆಗೊಳಿಸಿ ಮೆದುಳಿನ ಸೇವೆಯಲ್ಲಿರಿಸಿದ್ದರು. ಈ ರೀತಿಯಲ್ಲಿ ಅವರು 'ಮೇಧಾ' ಶಕ್ತಿಯನ್ನು ಅಥವಾ ಗ್ರಹಿಸುವ ಶಕ್ತಿಯನ್ನು, 'ಧೀ' ಶಕ್ತಿಯನ್ನು ಅಥವಾ ಚಿಂತನಾ ಪರಿಕಲ್ಪನೆಯ ಸೂಕ್ಷ್ಮತೆ ಮತ್ತು ಚುರುಕುತನವನ್ನು, ಸ್ಮರಣೆ ಮತ್ತು ಬೌದ್ಧಿಕ ಸೃಜನಶೀಲ ಶಕ್ತಿಯನ್ನು ಬಲಗೊಳಿಸಿ ಸ್ಮರಣೆ, ಆವಿಷ್ಕಾರ, ವಿವೇಚನೆ, ಈ ಮೂರು ಸಾಮರ್ಥ್ಯಗಳ ಶಕ್ತಿಯನ್ನು ಸಮಗ್ರ ಮತ್ತು ವಿಶ್ಲೇಷಣಾತ್ಮಕವಾಗಿ ಮಾಡಿದರಲ್ಲದೆ, ಮನಸ್ಸಿನ ಚಟುವಟಿಕೆಗಳಾದ ಗ್ರಹಿಸುವ, ಸಂಗ್ರಹಿಸುವ ಮತ್ತು ಸೃಜಿಸುವ ಶಕ್ತಿಯ ವ್ಯಾಪ್ತಿಯನ್ನು ಅವುಗಳ ತೀವ್ರತೆಯಷ್ಟೇ ಅಗಾಧವಾಗಿ ವಿಸ್ತರಿಸಿದರು. ಆದ್ದರಿಂದ, ಪಾಶ್ಚಾತ್ಯದ ಚರಿತ್ರೆಯಲ್ಲಿ ಕೆಲವೇ ಕೆಲವು ಅಸಾಮಾನ್ಯ ಬೌದ್ಧಿಕ ಜನರಿಗೆ ಮಾತ್ರ ಸಾಧ್ಯವಾಗಿದ್ದ ಆ ಸ್ಮರಣೆಯ ಅದ್ಭುತ ಕಾರ್ಯ, ವಿವಿಧ ಬಗೆಯ ಗ್ರಹಿಕೆ ಮತ್ತು ಬಹುಮುಖ ಪ್ರತಿಭೆಯ ಸೃಜನಶೀಲ ಸಾಧನೆಗಳು, ಪ್ರಾಚೀನ ಭಾರತದಲ್ಲಿ ಸಾಮಾನ್ಯವೂ ಸಹಜವೂ ಆಗಿದ್ದವು. ಮಿಸ್ಟರ್ ಗ್ಲಾಡ್ಸ್ಟೋನ್ (Mr. Gladstone) ಅದ್ಭುತ ಸ್ಮರಣಾಶಕ್ತಿ ಹೊಂದಿರುವ ಪ್ರೊಫೆಸರ್ ಎಂದು ಪರಿಗಣಿತರಾಗಿದ್ದರು. ಏಕೆಂದರೆ ಅವರು ಹೋಮರ್(Homer)ನ ಇಲಿಯೆಡ್ (Iliad) ಕಾವ್ಯವನ್ನು ಸೂಚಿಸಿದ ಯಾವುದೇ ಉದ್ಧೃತ ಭಾಗದಿಂದ ಆರಂಭಿಸಿ ಅಗತ್ಯವಿರುವವರೆಗೂ ಇಡಿಯಾಗಿ ನೆನಪಿನಿಂದ ಹೇಳಬಲ್ಲವರಾಗಿದ್ದರು; ಆದರೆ, ಪ್ರಾಚೀನ ಕಾಲದ ಒಬ್ಬ ಬ್ರಾಹ್ಮಣನಿಗೆ ಇವು ಅಸಾಮಾನ್ಯ ಅಥವಾ ಅದ್ಭುತ ಸಾಮರ್ಥ್ಯದ ಕುರುಹುಗಳಾಗಿರದೇ, ಅವು ಕೇವಲ ಅತ್ಯಲ್ಪ ಹಾಗೂ ಸೀಮಿತ ಸಾಮರ್ಥ್ಯಗಳಾಗಿದ್ದವು. ಯುರೋಪಿನಲ್ಲಿ ಒಬ್ಬ ಎರಟಾಸ್ತನೀಸನ್(Eratostheses)ನ ಬಹುಮುಖತೆ ಅಥವಾ ಹರ್ಬರ್ಟ್ ಸೆನ್ಸರ್(Herbert Spencer)ನ ಪ್ರತಿಭೆಯ ವ್ಯಾಪ್ತಿಗೆ ಮೆಚ್ಚುಗೆ ಅಥವಾ ವಿಸ್ಮಯಕರ ಅಭಿಪ್ರಾಯವನ್ನು ಹುಟ್ಟುಹಾಕಿವೆ; ಆದರೆ ಪ್ರಾಚೀನ ಭಾರತದಲ್ಲಿ ಸಾಮಾನ್ಯ ಪಠ್ಯಕ್ರಮದ ಸಾರ್ವತ್ರಿಕತೆಯು, ಅಸಾಧಾರಣರಾದ ಕೆಲವರಿಗೆ ಮಾತ್ರವಲ್ಲದೆ, ಪ್ರತಿಯೊಬ್ಬ ವಿದ್ಯಾರ್ಥಿಗೂ ಅನ್ವಯಿಸಿತ್ತು, ಮತ್ತು ಅದು ಆಧುನಿಕ ಯೋಜನೆಯಲ್ಲಿರುವಂತೆ ಅನೇಕ ವಿಷಯಗಳನ್ನು ಅಷ್ಟಿಷ್ಟು ಕಲಿಯುವುದಾಗಿರದೇ ಎಲ್ಲ ವಿಷಯಗಳನ್ನು ಸಂಪೂರ್ಣವಾಗಿ ಕರಗತ ಮಾಡಿಕೊಳ್ಳಬೇಕು ಎನ್ನುವುದು ಇದರ ಇಂಗಿತವಾಗಿತ್ತು. ಕಾಳಿದಾಸನು ತನ್ನ ಕುಶಾಗ್ರಮತಿಯಿಂದ ಕಾವ್ಯ ಸೃಷ್ಟಿಯ ಪ್ರತಿ ಸಾಲಿನಲ್ಲೂ ಸಾಧಿಸಿದ ಔನ್ನತ್ಯವು ಯುರೋಪಿಯನ್ ಮನಸ್ಸಿಗೆ ನಂಬಲಸಾಧ್ಯವಾದ ಸೋಜಿಗದ ಸಂಗತಿಯಾಗಿದ್ದು, ಸಾಮರಸ್ಯಗಳಲ್ಲಿಯೇ ಅತಿಶ್ರೇಷ್ಠ ಕೃತಿ ಆದ ಅದನ್ನು ಮೂರು ಭಾಗಗಳಾಗಿ ವಿಭಜಿಸಿ ಅರ್ಥಮಾಡಿಕೊಳ್ಳಲು ಯತ್ನಿಸುತ್ತದೆ. ಆದಾಗ್ಯೂ, ಇದು ಶಂಕರರ 32 ವರ್ಷದ ಅಲ್ಪಾಯು ಜೀವಿತದಲ್ಲಿನ ತತ್ವಜ್ಞಾನ ಸಾಧನೆಗೆ ಸಮಾನಾಂತರವಾಗಿದೆ ಮತ್ತು ನಮ್ಮ ಕಾಲದ ಶ್ರೀರಾಮಕೃಷ್ಣರ ಎಲ್ಲ ಸಾಧ್ಯ ಆಧ್ಯಾತ್ಮಿಕ ಜ್ಞಾನ ಹಾಗೂ ಅನುಭವದ ಸಾರ್ವಕಾಲಿಕ ಪರಿಣತಿಯ ಎದುರು ಕುಬ್ಜವಾಗಿದೆ. ಇಂಥ ನಿದರ್ಶನಗಳು ಬೇರೆಯ ನಿದರ್ಶನಗಳಂತೆ ಅಷ್ಟೊಂದು ಸಾಮಾನ್ಯವಲ್ಲ, ಏಕೆಂದರೆ ಶುದ್ಧ ಸೃಜನಶೀಲ ಪ್ರತಿಭೆಯು ಸಾಮಾನ್ಯವಾದುದಲ್ಲ; ಆದರೆ ಯುರೋಪಿನಲ್ಲಿ ಒಂದು ಏಕೈಕ ಆಧುನಿಕ ಅಪವಾದದ ಹೊರತು ಅವು ಇಲ್ಲವೇ ಇಲ್ಲ. ಯುರೋಪಿನಲ್ಲಿನ ಅತ್ಯುನ್ನತ ಸೃಜನಶೀಲ ಬುದ್ಧಿಜೀವಿಗಳು ಇತಿಮಿತಿಗಳಿಂದ ಮತ್ತು ಒಂದೇ ಬೌದ್ಧಿಕ ಕಾರ್ಯಕ್ಷೇತ್ರದ ಒಂದು ಕ್ಷೇತ್ರದಲ್ಲಿ ಅಥವಾ ಹೆಚೆಂದರೆ ಎರಡರಲ್ಲಿ ಅತ್ಯುತ್ತಮವಾದುದನ್ನು ಸಾಧಿಸುವ ಪ್ರಯತ್ನದ ಮೂಲಕ ಬೌದ್ಧಿಕ ಶ್ರೇಷ್ಠತೆಯನ್ನು ಸಾಧಿಸಿದ್ದಾರೆ; ಅವರು

ಸರ್ವಸಮರ್ಥರಾಗಿದ್ದ ಸಂದರ್ಭಗಳಲ್ಲಿ ಹರಿವಿಗಾಗಿ ಔನ್ನತ್ಯವನ್ನು ತ್ಯಾಗ ಮಾಡಿದ್ದಾರೆ ಆದರೆ ಭಾರತದಲ್ಲಿ, ಅತ್ಯುನ್ನತ ಮಟ್ಟವನ್ನು ಸಾಧಿಸುವ ಪ್ರಯತ್ನವನ್ನು ಒಂದಿಷ್ಟೂ ತ್ಯಾಗ ಮಾಡದೆ ಅಥವಾ ತಮ್ಮ ಸೃಜನಶೀಲತೆಯ ತೀವ್ರತೆಯನ್ನು ಎಳ್ಳಷ್ಟೂ ತ್ಯಾಗ ಮಾಡದೆ ಸುಲಭವಾಗಿ, ಯಾವ ತಡವರಿಕೆಯಿಲ್ಲದೇ, ಪಾಂಡಿತ್ಯ ಹೊಂದಿದ ಆತ್ಮವಿಶ್ವಾಸದಿಂದ ಒಂದು ಸಾಧನೆಯ ಕ್ಷೇತ್ರದಿಂದ ಮತ್ತೊಂದಕ್ಕೆ ಸಾಗಿದ ಶ್ರೇಷ್ಠ ವ್ಯಕ್ತಿಗಳು ಬಹುಮುಖಿಗಳೇ ಆಗಿರುತ್ತಾರೆ. ಬ್ರಹ್ಮಚರ್ಯದಿಂದ ಹುಟ್ಟಿಕೊಂಡ ಸಾಫಲ್ಯಪೂರ್ಣ ಶಕ್ತಿಯಲ್ಲಿ ಪರಾಕಾಷ್ಠೆಯನ್ನು ತಲುಪುವ ಈ ಸುಲಭ ಮತ್ತು ಸಾಫಲ್ಯಪೂರ್ಣ ಪ್ರಕಾಶವು, 'ಸತ್ವ' ಅಥವಾ ಆಂತರಿಕ ಪ್ರಕಾಶವನ್ನು ಬೆಳೆಸಿದ ಶಿಸ್ತಿನಿಂದ ಸಾಧಿತವಾದುದು. ಈ ಪ್ರಕಾಶವು ಜ್ಞಾನ ಗಳಿಕೆಯನ್ನು ಮತ್ತಿತರ ಬೌದ್ಧಿಕ ಕಾರ್ಯಗಳನ್ನು ಸುಲಭವೂ, ಸಹಜವೂ, ತ್ವರಿತವೂ, ನಿರ್ಧಾರಕವೂ ಮತ್ತು ದೇಹ ಅಥವಾ ಮೆದುಳಿಗೆ ತುಲನಾತ್ಮಕವಾಗಿ ಯಾವ ದಣಿವನ್ನುಂಟು ಮಾಡದೆಯೂ ಸಾಧ್ಯವಾಗಿಸುತ್ತದೆ. ಈ ಎರಡರಲ್ಲಿ ಆರ್ಯರ ಬೌದ್ಧಿಕ ಸಾಧನೆಯ ಗುಟ್ಟು ಅಡಗಿರುವುದು. ಭಾರತದ ಸೂಕ್ಷ್ಮಪರಿಜ್ಞಾನವನ್ನು ಸೃಷ್ಟಿಸಿದ ಬ್ರಹ್ಮಚರ್ಯ ಮತ್ತು ಸಾತ್ವಿಕ ಬೆಳವಣಿಗೆಯು ಯೋಗವು ಅದನ್ನು ಪರಿಪೂರ್ಣಗೊಳಿಸಿತು.

ನಮ್ಮ ವಿದ್ಯಾರ್ಥಿಗಳೂ ಹಲವು ವಿಷಯಗಳನ್ನು, ಅನೇಕ ಪುಸ್ತಕಗಳನ್ನು ಅಭ್ಯಸಿಸುವ ಹೊರೆಯಿಂದ ನರಳುತ್ತಿದ್ದಾರೆ ಎಂಬ ಸಾಮಾನ್ಯ ದೂರೊಂದಿದೆ. ಈ ದೂರು, ನಿಜಕ್ಕೂ ಸತ್ಯವಾದುದು. ಇದರಷ್ಟೇ ಸತ್ಯವೆಂದರೆ ಅಧ್ಯಯನಗಳ ವ್ಯಾಪ್ತಿಯೂ ಕರುಣಾಜನಕವಾಗಿ ಸಂಕುಚಿತವಾಗಿದ್ದು ಓದಿರುವ ಪುಸ್ತಕಗಳು ಕೆಲವೇ ಕೆಲವಾಗಿತ್ತು. ಈ ವಿರೋಧಾಭಾಸಕ್ಕೆ ಕಾರಣಗಳೇನು? ಪರಸ್ಪರ ಸ್ಪಷ್ಟವಾಗಿ ವಿರುದ್ಧವಾಗಿರುವ ಈ ಸತ್ಯಗಳನ್ನು ಹೇಗೆ ಸಮರ್ಥಿಸುವುದು? ಇದನ್ನು ಹೀಗೆ ವಿವರಿಸಬಹುದು: ನಾವು ಅಡಿಪಾಯವನ್ನು ನಿರ್ಲಕ್ಷಿಸುತ್ತೇವೆ. ಗಾತ್ರದಲ್ಲಿ ಚಿಕ್ಕದಾಗಿರುವ ಅದರ ಮೇಲೆ, ಅದು ತಾಳಲಾಗದ, ಅದಕ್ಕೆ ಹೊಂದಿಕೆಯಾಗದ ಭಾರವಾದ ಬೃಹತ್ ರಚನೆಯನ್ನು ನಿರ್ಮಿಸಲು ತಕ್ಷಣವೇ ದೌಡಾಯಿಸುತ್ತೇವೆ; ನಾವು ಹೇಳಿಕೊಡುವ ನಗಣ್ಯ ಮತ್ತು ಸತ್ವಹೀನ ಜ್ಞಾನದ ಸಣ್ಣ ಭಾರವನ್ನೂ ಹೊರಲಾರದಷ್ಟು ಬಡಕಲೂ, ದುರ್ಬಲವೂ ಆಗಿರುವ ಅಡಿಪಾಯದ ಮೇಲೆ ನಮ್ಮ ಜ್ಞಾನದ ಕಟ್ಟಡವನ್ನು ಕಟ್ಟುತ್ತೇವೆ. ಭಾರತೀಯ ಬುದ್ಧಿಶಕ್ತಿಯ ಸಾಧ್ಯತೆ ಈಗಲೂ ಹಿಂದೆ ಇದ್ದಂತೆಯೇ ಇದೆ; ಆದರದು ಹಾನಿಗೊಳಗಾಗಿದೆ, ಕುಂಠಿತಗೊಂಡು ವಿರೂಪಗೊಂಡಿದೆ. ಅದರಲ್ಲಿ ಅಂತರ್ಗತವಾಗಿರುವ ಸಹಜ ಸಾಧ್ಯತೆಗಳ ಶ್ರೇಷ್ಠತೆಯು ಅದರ ಮೇಲು ಪದರಿನ ಹಾನಿಯ ಅಗಾಧತೆಯಿಂದ ಮರೆಯಾಗಿದೆ. ವಿದೇಶಿ ಭಾಷೆಯನ್ನು ಅಪರಿಪೂರ್ಣವಾಗಿಯೂ ಕರಗತ ಮಾಡಿಕೊಂಡಿರದ ಸಂದರ್ಭದಲ್ಲಿ ವಿದ್ಯಾರ್ಥಿಯನ್ನು ಆ ಅಸಾಧ್ಯ ಮಾಧ್ಯಮದ ಮೂಲಕ ವಿವಿಧ ಅನ್ಯ ಹಾಗೂ ಅಪರಿಚಿತ ವಿಷಯಗಳನ್ನು ಕಲಿಯಲು ಒತ್ತಾಯ ಮಾಡುವುದರಿಂದ ಹಳೆಯ ವ್ಯವಸ್ಥೆಯು ಅದನ್ನು ಅಡ್ಡಿಪಡಿಸಿದೆ. ಈ ಅಸ್ವಾಭಾವಿಕ ಪ್ರಕ್ರಿಯೆಯಲ್ಲಿ ವಿವೇಚನೆ, ವೀಕ್ಷಣೆ, ಗ್ರಹಿಕೆ ಮತ್ತು ಸೃಷ್ಟಿಯನ್ನು ಬಳಸದಿರುವುದರಿಂದ ಮತ್ತು ಪ್ರಾಚೀನ ಭಾರತೀಯ ಸ್ಮರಣೆಯ ಹದಗೆಡುತ್ತಿರುವ ಅವಶೇಷಗಳ ಮೇಲಿನ ವಿಶೇಷ ಅವಲಂಬನೆಯಿಂದ ಅದು ದುರ್ಬಲಗೊಂಡಿತ್ತು. ಅಂತಿಮವಾಗಿ, ಸಮೃದ್ಧವಾಗಿ ಸಂಗ್ರಹಿಸಿದ ಮತ್ತು ಶಕ್ತಿಯುತವಾಗಿ ಸಿದ್ಧಗೊಳಿಸಿದ ಮಾಹಿತಿಯ ಬದಲು ಅಸಮರ್ಪಕ ಮಾಹಿತಿ ತುಂಡುಗಳೊಂದಿಗೆ ವ್ಯವಹರಿಸಬೇಕಾದ ಕಾರಣದಿಂದಾಗಿ ಅದು ಅಪಮೌಲ್ಯಗೊಂಡು ಹದಗೆಟ್ಟಿತು.

ನವ ರಾಷ್ಟ್ರೀಯ ಶಿಕ್ಷಣವು ಮಾತೃಭಾಷೆಯನ್ನು ಬಳಸುವುದರ ಮೂಲಕ, ಬಳಸದೇ ಬಿಟ್ಟಿದ್ದ ಬೌದ್ಧಿಕ ಕಾರ್ಯಗಳ ಬಳಕೆಯನ್ನು ಮರುಸ್ಥಾಪಿಸುವುದರಿಂದ, ಮಾಹಿತಿಯ ಉತ್ಕೃಷ್ಟ ಮತ್ತು ನೈಜ ಸಲಕರಣೆಗಳನ್ನು ಒದಗಿಸುವುದರಿಂದ, ಜ್ಞಾನದ ವಿಷಯ ಮತ್ತು ರಚನಾತ್ಮಕತೆಗೆ ಸಂಬAಧಿಸಿದ ವಸ್ತುಗಳನ್ನು ಒದಗಿಸುವುದರಿಂದ ಆಗಿರುವ ಕೇಡನ್ನು ಇಲ್ಲವಾಗಿಸಲು ಪ್ರಯತ್ನಿಸಿತು. ಅದು ವಿಜಯಶಾಲಿಯಾಗಿ ಯಶಸ್ವಿಯಾಗದಿದ್ದರೆ, ಅದಕ್ಕೆ

ಭಾಗಶಃ ಕಾರಣ, ಹಳೆಯ ವ್ಯವಸ್ಥೆಯಿಂದ ಕಲುಷಿತಗೊಂಡ ಮನಸ್ಸುಗಳೊಂದಿಗೆ, ಅದರಲ್ಲೂ ಅನೇಕವೇಳೆ ಉತ್ತಮವಲ್ಲದ ಮನಸ್ಸುಗಳೊಂದಿಗೆ ವ್ಯವಹರಿಸಬೇಕಿತ್ತು, ಏಕೆಂದರೆ ಸ್ವತಃ ಶಿಕ್ಷಕರು ಹೊಸ ವ್ಯವಸ್ಥೆಯ ಅಗತ್ಯಗಳ ಪರಿಪೂರ್ಣ ಗ್ರಹಿಕೆ ಹೊಂದಿರುವುದು ವಿರಳವಾಗಿತ್ತು; ಅದರ ನಿಯಂತ್ರಕರು ಮತ್ತು ನಿರ್ದೇಶಕರು ಪರಿಚಿತ ತತ್ತ್ವಘೋಷಣಾವಾಕ್ಯ (shibboleth - ಸಾಮಾನ್ಯವಾಗಿ ನಂಬುವ ಮತ್ತು ಪುನರಾವರ್ತಿಸುವ ಹಳೆಯ ಕಲ್ಪನೆ, ಅಭಿಪ್ರಾಯ ಅಥವಾ ಹೇಳಿಕೆ) ಮತ್ತು ಹಾನಿಕಾರಕ ಭ್ರಮೆಗಳಿಗೆ ನೆಚ್ಚಿಕೊಂಡಿದ್ದ ಹಳೆಯ ವ್ಯವಸ್ಥೆಗೆ ಸೇರಿದವರಾಗಿದ್ದರು. ಆದರೆ ವ್ಯವಸ್ಥೆಯಲ್ಲಿಯೇ ದೋಷವಿತ್ತು, ಬೇರೆಯ ಯುಗ ಮತ್ತು ದೇಶಗಳಲ್ಲಿ ಅದಕ್ಕಷ್ಟು ಮಹತ್ವ ಕೊಡದಿದ್ದರೂ ಹುಲ್ಲಿನಿಂದ ಇಟ್ಟಿಗೆಯನ್ನು ಮಾಡಬೇಕಿರುವ ಇಂಥ ಸ್ಥಿತ್ಯಂತರದ ಸಮಯದಲ್ಲಿ, ಈಗ ಮಾಡುವ ಕೆಲಸವು ನಮ್ಮ ದೇಶದ ಭವಿಷ್ಯತ್ತಿನ ಸಾಧನೆಯನ್ನು ನಿರ್ಣಯಿಸುವಂಥ ಸಮಯದಲ್ಲಿ ತುಂಬ ಮಹತ್ವದ್ದು. ರಾಷ್ಟ್ರ¿Ãಯ ಶಿಕ್ಷಣ ಎಂದು ತನ್ನನ್ನು ತಾನು ಕರೆದುಕೊಳ್ಳುವಾಗಲೇ, ಅದು ನಮ್ಮ ಹಿರಿಯರ ಮಹಾನ್ ಸಾಧನೆಗಳ ಬುನಾದಿಯನ್ನೇ, ಅದರಲ್ಲೂ ವಿಶೇಷವಾಗಿ ಜ್ಞಾನ ಸಾಧನೆಯ ಸಾಧನದ ಪರಿಪೂರ್ಣತೆಯನ್ನು ಅಲಕ್ಷಿಸಿತ್ತು.

ಪ್ರಾಚೀನ ಶಿಕ್ಷಣ ವ್ಯವಸ್ಥೆಯು ಅದರ ಹೊರಲಕ್ಷಣಗಳೊಂದಿಗೆ ಪುನಃ ಸ್ಥಾಪಿತವಾಗಬೇಕೆಂಬುದು ನಮ್ಮ ವಾದವಲ್ಲ - ಅದು ಉತ್ಸಾಹಪೂರ್ಣ ಭೂತಕಾಲ ಪ್ರಿಯರ ಬೇಡಿಕೆ. ಅದರಲ್ಲಿ ಬಹಳಷ್ಟು ಆಧುನಿಕ ಅಗತ್ಯಗಳಿಗೆ ಸೂಕ್ತವಾಗಿಲ್ಲ. ಆದರೆ, ಅದರ ಮೂಲ ತತ್ವಗಳು ಸಾರ್ವಕಾಲಿಕವಾದುವು ಮತ್ತು ಯುರೋಪಿನ ಶಿಕ್ಷಣವು ನಮಗೆ ಒದಗಿಸಲಾಗದಂಥ ಅದರ ಶಿಸ್ತು ಇನ್ನೂ ಹೆಚ್ಚು ಪರಿಣಾಮಕಾರಿಯಾದ ಶಿಸ್ತಿನ ಆವಿಷ್ಕಾರದಿಂದ ಮಾತ್ರ ಬದಲಿಸಲು ಸಾಧ್ಯ. ಈ ಲೇಖನಗಳ ಉದ್ದೇಶವು ಪ್ರಾಚೀನ ವ್ಯವಸ್ಥೆಯ ಸ್ವರೂಪ ಮತ್ತು ಅದರ ಮನೋವೈಜ್ಞಾನಿಕ ವಿಚಾರಗಳನ್ನು ಸೂಚಿಸುವುದು ಮತ್ತು ನಮ್ಮ ಪುರಾತನರ ವೈಭವಪೂರ್ಣ ಸಾಧನೆಗೆ ಇದ್ದ ಅದರ ಅತ್ಯಗತ್ಯ ಕಾರ್ಯಕಾರಣ ಸಂಬಂಧದತ್ತ ಗಮನ ಸೆಳೆಯುವಂತೆ ಮಾಡುವುದಾಗಿದೆ. ಅದರ ತತ್ವಗಳನ್ನು ಹೇಗೆ ಪುನಃ ಅನ್ವಯ ಮಾಡಬಹುದು ಅಥವಾ ಪೂರ್ಣಗೊಳಿಸಬಹುದು ಮತ್ತು ಇನ್ನೂ ಆಳವಾದ ಮನೋವಿಜ್ಞಾನದಿಂದ ಮತ್ತು ಇನ್ನೂ ಹೆಚ್ಚಿನ ಪರಿಣಾಮಕಾರಿ ಶಿಸ್ತಿನಿಂದ ಸ್ವಲ್ಪ ಮಟ್ಟಿಗೆ ಬದಲಿಸಬಹುದು ಎಂಬುದು ಬೇರೆಯದೇ ಆದ ಅಧ್ಯಯನಕ್ಕೆ ಯೋಗ್ಯವಾದ ವಿಷಯವಾಗಿದೆ.

# ರಾಷ್ಟ್ರೀಯ ಶಿಕ್ಷಣ ಸಪ್ತಾಹಕ್ಕೆ ಒಂದು ಸಂದೇಶ (1918)

ರಾಷ್ಟ್ರೀಯ ಶಿಕ್ಷಣವು ಸ್ವಯಂ-ಆಡಳಿತದಷ್ಟೇ ಮುಖ್ಯವಾದದು. ಅಷ್ಟೇ ಅಲ್ಲದೆ ಅತ್ಯಂತ ಗಂಭೀರವಾಗಿ ಹಾಗೂ ತುಂಬಾ ತುರ್ತಾಗಿ ಈ ಕ್ಷಣವೇ ಆಗಬೇಕಾದ ದೇಶದ ಅಗತ್ಯವಿದು. ರಾಷ್ಟ್ರದ ವಿಶಾಲ ಜೀವನ ಹಾಗೂ ಅದರ ಭರವಸೆಗಳೊಂದಿಗೆ ನನ್ನನ್ನು ಗುರುತಿಸಿಕೊಳ್ಳಲು ಪ್ರಪ್ರಥಮ ಅವಕಾಶವನ್ನು ಕೊಟ್ಟ ಸ್ವಲ್ಪ ಕಾಲ ಕಡೆಗಣಿಸಲ್ಪಟ್ಟ ವಿಚಾರವು ಇಷ್ಟು ಬೇಗ ತನ್ನ ಸಾರ್ಥಕತೆ/ ಪೂರ್ಣವಿಕಾಸದತ್ತ ಚಲಿಸುತ್ತಿರುವುದು ಈ ದಿಕ್ಕಿನಲ್ಲಿ ಮೊದಲಿಂದಲೂ ಕಾರ್ಯಪ್ರವೃತ್ತನಾಗಿದ್ದ ನನಗೆ ಸಂಭ್ರಮಿಸುವ ಸಂಗತಿಯಿದು.

ಸ್ವರಾಜ್ಯ ಮತ್ತು ರಾಷ್ಟ್ರೀಯ ಶಿಕ್ಷಣ ಇವೆರಡೂ ಪ್ರತ್ಯೇಕಿಸಲಾಗದ ಆದರ್ಶಗಳು. ಪ್ರಾಮಾಣಿಕತೆ ಅಥವಾ ದೂರದೃಷ್ಟಿಯ ಕೊರತೆ ಇಲ್ಲದಿರುವ ಯಾರೇ ಆದರೂ ಇವುಗಳಲ್ಲಿ ಯಾವುದಾದರೂ ಒಂದನ್ನು ಪಾಲಿಸುವವರು ಖಂಡಿತವಾಗಿಯೂ ಇನ್ನೊಂದನ್ನು ಪಾಲಿಸುವವರಾಗಿರುತ್ತಾರೆ. ನಮಗೆ ಬೇಕಿರುವುದು ಕೇವಲ ಸ್ವತಂತ್ರ ಭಾರತ ಮಾತ್ರವಲ್ಲ; ನಮಗೆ ಬೇಕಿರುವುದು ಒಂದು ಶ್ರೇಷ್ಠ ಭಾರತ; ಆಕೆಯಿಂದ ಮಾತ್ರ ಸಾಧ್ಯವಾಗಬಲ್ಲ ಮಾನವಕುಲಕ್ಕೆ ಚೈತನ್ಯ ತುಂಬುವ, ವಿಶ್ವ ರಾಷ್ಟ್ರಗಳಲ್ಲಿ ತನಗೆ ಯೋಗ್ಯವಾದ ಸ್ಥಾನವನ್ನು ಪಡೆದುಕೊಳ್ಳುವ ಶ್ರೇಷ್ಠ ಭಾರತ. ಮನುಷ್ಯನು ಹೊಂದಬಹುದಾದ ಅತ್ಯುನ್ನತ ಜ್ಞಾನ ಮತ್ತು ಅತ್ಯುನ್ನತ ಸಂಪತ್ತುಗಳು ಆಕೆಯಲ್ಲಿ ಸಹಜವಾಗಿ ಇರುವಂಥವು; ಇಡೀ ಮಾನವಕುಲವು ಹೊಂದಲು ಬಯಸುತ್ತಿರುವುದು ಆಕೆಯಲ್ಲಿದೆ. ಆದರೆ ಆಕೆಯು ಸ್ವತಂತ್ರವಾಗಿದ್ದು, ಆಕೆಯ ಆತ್ಮವು ಸ್ವತಂತ್ರವಾಗಿದ್ದು, ಸಂಪೂರ್ಣವಾಗಿದ್ದು ಹಾಗೂ ಔನ್ನತ್ಯ ಸ್ಥಾನದಲಿದ್ದು, ಆಕೆಯ ಜೀವನವೆಲ್ಲವೂ ಗೌರವಪೂರ್ಣವಾಗಿದ್ದರೆ ಮಾತ್ರ ಆಕೆ ಅದೆಲ್ಲವನ್ನೂ ಕೊಡಬಲ್ಲಳು. ಸ್ವರಾಜ್ಯವು ಸ್ವಯಂ ಆಡಳಿತಕ್ಕೆ ದಾರಿಮಾಡಿಕೊಟ್ಟು ಆ ಸಂಪೂರ್ಣ ಸ್ವಾತಂತ್ರ್ಯದಿಂದಾಗಿ ಅದು ಆಕೆಯ ಆತ್ಮದ ಬೆಳವಣಿಗೆಗೆ ಅವಕಾಶವನ್ನು, ಕತ್ತಲೆ ಮತ್ತು ಸಂಕುಚಿತ ವ್ಯಾಪ್ತಿಗಳಿಂದ ಬಿಡುಗಡೆ ಹೊಂದಿ ಬೆಳಕು ಮತ್ತು ಉದಾತ್ತತೆಯ ಜೀವನಕ್ಕೆ ಉದ್ದೀಪನ ಶಕ್ತಿಯನ್ನು ಕೊಡಬಲ್ಲದು. ಆದರೆ ಆ ಗತದ ಬಳುವಳಿ, ವರ್ತಮಾನ ಕಾಲದ ವ್ಯಾಪಕವಾಗುತ್ತಿರುವ ಪ್ರಯೋಜನಗಳು ಮತ್ತು ಭವಿಷ್ಯತ್ತಿನ ಭಾರಿ ಸಾಧ್ಯತೆಗಳಿಂದ ಸಂಪದ್ಭರಿತವಾಗಿದ್ದು ಎಲ್ಲವನ್ನು ಸಾಧಿಸಲಾಗುವ ಆತ್ಮವು ರಾಷ್ಟ್ರೀಯ ಶಿಕ್ಷಣದಿಂದ ಮಾತ್ರ ಸಾಧ್ಯವಾಗುವುದು. ಸದ್ಯ ಪ್ರಚಲಿತದಲ್ಲಿರುವ ಮೂಲಭೂತವಾಗಿ ತಪ್ಪು ತತ್ವಗಳನ್ನಾಧರಿಸಿರುವ, ದೋಷಯುಕ್ತ ಹಾಗೂ ಯಾಂತ್ರಿಕ ವಿಧಾನಗಳನ್ನು ಹೊಂದಿರುವ, ಅರೆ-ಜೀವವುಳ್ಳ ಯಾಂತ್ರಿಕ ಸಂಪ್ರದಾಯ ಅನುಸರಿಸುತ್ತಿರುವ, ಸಂಕುಚಿತ ಮತ್ತು ವಿಚಾರಹೀನ ಚೈತನ್ಯವನ್ನು ಆಧರಿಸಿ ನಡೆಯುತ್ತಿರುವ ವಿಶ್ವವಿದ್ಯಾಲಯ ಶಿಕ್ಷಣವನ್ನು ಅನುಕರಿಸುವುದರಿಂದ ಅಥವಾ ವಿಸ್ತರಣೆಯಿಂದ ಈ ಘನೋದ್ದೇಶ ಸಾಕಾರಗೊಳ್ಳದು. ರಾಷ್ಟ್ರದ ಪುನರುತ್ಥಾನದ ಬೆಳಕಿನ ಪ್ರಕಾಶ ಮತ್ತು ಭರವಸೆಯಿಂದ ತುಂಬಿದ ಅದರ ಹೃದಯದಿಂದ ಉದ್ಭವಿಸುವ ಒಂದು ಹೊಸ ಚೈತನ್ಯ ಹಾಗೂ ಒಂದು ಹೊಸ ಸಮುದಾಯವು ಮಾತ್ರ ಅದನ್ನು ಸೃಷ್ಟಿಸಬಲ್ಲದು - ಸಾಕಾರಗೊಳಿಸಬಲ್ಲದು.

ದೇಶವು ತನ್ನ ಸುವರ್ಣಾವಕಾಶದ ಮಟ್ಟಕ್ಕೆ ಏರುತ್ತದೆ ಮತ್ತು ಸ್ವಯಂ-ಆಡಳಿತ ಚಳುವಳಿಯೊಂದಿಗೆ ನಿಂತಂತೆ ರಾಷ್ಟ್ರೀಯ ಶಿಕ್ಷಣ ಚಳುವಳಿಯೊಂದಿಗೂ ನಿಲ್ಲುತ್ತದೆ ಎಂದು ನಿರೀಕ್ಷಿಸುವ ಹಕ್ಕನ್ನು ನಾವು ಹೊಂದಿದ್ದೇವೆ. ಅದಕ್ಕೊಂದು ಬೌದ್ಧಿಕ ಅನುಮೋದನೆ ಅಥವಾ ರಾಷ್ಟ್ರೀಯ ಶಿಕ್ಷಣಕ್ಕೆಂದು ಬೆಂಬಲ ದೊರಕಿಸಿಕೊಳ್ಳುವುದು ಕಷ್ಟಸಾಧ್ಯವೇನಲ್ಲ; ಆದರೆ ಇದಕ್ಕಿಂತ ಹೆಚ್ಚಿನದರ ಅವಶ್ಯಕತೆಯಿದೆ. ಆ ಬೆಂಬಲವು ಬಾಯಿಮಾತಿನ ಸೇವೆ, ಜಡತ್ವ ಮತ್ತು ಆಲಸ್ಯಪೂರ್ಣ ನಿಷ್ಕ್ರಿಯತೆ, ದೀರ್ಘಕಾಲದ ರಾಜಕೀಯ ದಾಸ್ಯ-

ಆಲಸ್ಯಗಳಿಂದ ಹುಟ್ಟಿದ ದುರಭ್ಯಾಸಗಳು ಹಾಗೂ ಅದಕ್ಕೆ ಬಹುಪಾಲು ಕಾರಣವಾದ ಜೀವನ ಮತ್ತು ಆತ್ಮದ ದೃಷ್ಟಿಹೀನ ಹಾಗೂ ಯಾಂತ್ರಿಕ ರೂಢಿಗತ ಅಭ್ಯಾಸಗಳಿಗೆ ಈಡಾದ ಪರಾಧೀನತೆಯಿಂದ ಮುಕ್ತವಾಗಿರಬೇಕು. ಇಲ್ಲಿ ಕೇವಲ ನೈತಿಕ ಅನುಕಂಪ ಸಾಲದು; ಪ್ರತಿಯೊಬ್ಬರ ಕ್ರಿಯಾತ್ಮಕ ಬೆಂಬಲದ ಅವಶ್ಯಕತೆ ಇಲ್ಲಿದೆ. ಚಳುವಳಿಯ ಏಳಿಗೆಗೆ ಬೇಕಿರುವುದು ಆ ಉದ್ದೇಶಕ್ಕಾಗಿ ದುಡಿಯುವ ಕೆಲಸಗಾರರು, ಅದರ ಸ್ಥಿರತೆಗಾಗಿ ಹಣ ಮತ್ತು ಸಾಧನಗಳು, ಅದರ ಶಾಲೆ ಕಾಲೇಜುಗಳಿಗಾಗಿ ವಿದ್ಯಾರ್ಥಿಗಳು. ಮೊದಲನೆಯದಕ್ಕೆ ಖಂಡಿತವಾಗಿಯೂ ಕೊರತೆಯಿಲ್ಲ; ಎರಡನೆಯದು ಬರಲೇ ಬೇಕು, ಏಕೆಂದರೆ ಚಳುವಳಿಯನ್ನು ನಿಯಂತ್ರಿಸಲು ಬೇಕಿರುವ ಪ್ರಭಾವ ಮತ್ತು ಶಕ್ತಿ ಅದರ ಸದಸ್ಯರಲ್ಲಿಯೇ ಇರುತ್ತದೆ. ಮತ್ತು ದೇಶದಲ್ಲಿ ಕೊಡುವ ಅಭ್ಯಾಸದ ಜೊತೆಗೆ ಸಾರ್ವಜನಿಕ ಉದ್ದೇಶಕ್ಕಾಗಿ ತನ್ನನ್ನೇ ಅರ್ಪಿಸಿಕೊಳ್ಳುವ ಪ್ರವೃತ್ತಿ ಹೆಚ್ಚು ವ್ಯಾಪಕವಾಗುತ್ತಿದೆ. ವ್ಯಕ್ತಿಗತವಾಗಿ ಯಾವಾಗಲೂ ಸಾಂಪ್ರದಾಯಿಕ ಜಾಡಿನಲ್ಲಿ ಹೋಗಿ ಅಭ್ಯಾಸವಾಗಿರುವ ನಮಗೆ ಸುರಕ್ಷಿತ ಹಾಗೂ ಗೊತ್ತುಮಾಡಿದ ದಾರಿಯನ್ನು, ಮಹತ್ವದ ಮತ್ತು ಪರಿಣಾಮಕಾರಿಯಾದ ದಾರಿಯೆಡೆಗೆ ಕೊಂಡೊಯ್ಯದಿದ್ದರೂ ನಾವು ಅದನ್ನೇ ಆಯ್ಕೆಮಾಡಿಕೊಳ್ಳುವುದು, ಮತ್ತು ಅದು ತನ್ನನ್ನು ಹೊಸದಾದ ಹಾಗೂ ಈ ವರೆಗೆ ಯಾರೂ ಪ್ರಯತ್ನಿಸದ ರೂಪದಲ್ಲಿ ಪ್ರಸ್ತುತಪಡಿಸಿಕೊಳ್ಳುವುದರಿಂದ ನಮ್ಮದೇ ಆದ ಹಿತಾಸಕ್ತಿಯನ್ನು ಕಂಡುಕೊಳ್ಳಲು ವಿಫಲರಾಗುವುದು ಮೂರನೇ ಪೂರ್ವಾಪೇಕ್ಷಿತ ಮೊದಲಿನಿಂದಲೂ ಸಾಕಷ್ಟು ತೃಪ್ತಿಕರವಾಗಿಲ್ಲದಿರುವುದಕ್ಕೆ ಕಾರಣವಾಗುತ್ತದೆ. ಆದರೆ, ಇದು ಚೈತನ್ಯದ ಸಣ್ಣತನ. ರಾಷ್ಟ್ರವು ತನ್ನ ಅದೃಷ್ಟವನ್ನು ತಾನೇ ಕಾಣುವ ಧೈರ್ಯ ಪಡೆದುಕೊಳ್ಳಲು ಈ ಸಣ್ಣತನದಿಂದ ಹೊರಬರಲೇಬೇಕು.

ಒಂದು ವೇಳೆ ಸಣ್ಣಪುಟ್ಟ ಮತ್ತು ಸೂಕ್ಷ್ಮ ಅಭಿಪ್ರಾಯಗಳು ಅಡ್ಡ ಬಂದರೆ, ಆಗ ಹಳೆಯ ವ್ಯವಸ್ಥೆಯು - ವೃತ್ತಿಯ ಕ್ಷೇತ್ರದಲ್ಲೂ - ಕೆಲವೇ ಕಚೇರಿಗಳ ಮತ್ತು ವೃತ್ತಿಗಳ ಬಾಗಿಲುಗಳನ್ನು ತೆರೆಯುತ್ತದೆ; ವಿಪರೀತ ಸಂಖ್ಯೆಯ ಅರ್ಜಿದಾರರಿಂದ ಕಿಕ್ಕಿರಿಯುತ್ತದೆ. ಅವರಲ್ಲಿ ಬಹುಪಾಲು ಜನ ನಿರಾಶರಾಗಿ ಬರಿಗೈಯಿಂದ ಹಿಂದಿರುಗಬೇಕಾಗುತ್ತದೆ ಅಥವಾ ಅಭಿವೃದ್ಧಿ ಹೊಂದದ ಬದುಕಿನೊಂದಿಗೆ, ಅಲ್ಪ ಪುಡಿಗಾಸಿನೊಂದಿಗೆ ತೃಪ್ತರಾಗಿರಬೇಕಾಗುತ್ತದೆ. ಅದುವೇ ಹೊಸ ಶಿಕ್ಷಣವು ಸಾಕಷ್ಟು ಗೌರವಯುತವಾದ, ಉದ್ಯೋಗಗಳ ದಾರಿಗಳನ್ನು ಒಮ್ಮೆಲೇ ತೆರೆದು, ವ್ಯಕ್ತಿಗೆ ಘನತೆಯನ್ನು ಮತ್ತು ಸಂಪತ್ತನ್ನು ಹಾಗೂ ದೇಶಕ್ಕೆ ಸೇವೆ ಒದಗಿಸುವ ದಾರಿಯನ್ನೂ ತೆರೆಯುತ್ತದೆ ಎಂಬುದನ್ನು ತೋರಿಸಿಕೊಡಬೇಕು. ಏಕೆಂದರೆ ಈ ನವ ಸಂಸ್ಥೆಗಳಿಂದ ಪ್ರತಿಯೊಂದು ರೀತಿಯಲ್ಲೂ ಸಿದ್ದವಾಗಿ ಹೊರಬರುವ ವ್ಯಕ್ತಿಗಳೇ ದೇಶದ ಆರ್ಥಿಕ ಜೀವನ ಮತ್ತು ಅದರ ಎಲ್ಲ ಪ್ರಯತ್ನಗಳಿಗೆ ಬಲ ತುಂಬುವವರಾಗಿರುತ್ತಾರೆ; ಇಂತಹವರ ಬೆಂಬಲವಿಲ್ಲದೆ ದೇಶವು ಜಗತ್ತಿನ ಒತ್ತಡಗಳನ್ನು ಮೀರಿ ಬದುಕುಳಿಯಲು ಆಗದು, ತನ್ನ ಉನ್ನತ ಗುರಿಯನ್ನು ಸಾಧಿಸಲು ಸಾಧ್ಯವಾಗದು. ವ್ಯಕ್ತಿಯ ಆಸಕ್ತಿ ಮತ್ತು ರಾಷ್ಟ್ರದ ಆಸಕ್ತಿ ಒಂದೇ ಆಗಿದ್ದು ಅವುಗಳು ಒಂದೇ ದಿಕ್ಕಿನಲ್ಲಿ ಸಾಗಲು ಕರೆ ನೀಡುತ್ತವೆ. ನಾಗರಿಕನಾಗಿ ಆಗಲೀ, ಕೆಲಸಗಾರನಾಗಿಯಾಗಲೀ, ಅಥವಾ ಪಾಲಕ ಮತ್ತು ಪೋಷಕನಾಗಿಯಾಗಲೀ, ಈ ವಿಷಯದಲ್ಲಿ ಪ್ರತಿಯೊಬ್ಬ ಭಾರತೀಯನ ಕರ್ತವ್ಯವು ಸ್ಪಷ್ಟವಿದೆ: ಅದು ಮುತ್ಸದ್ದಿ ನಾಯಕರುಗಳು ಕಂಡರಿಸುತ್ತಿರುವ ಮಹತ್ವದ ಹೊಸ ದಾರಿಯಲ್ಲಿ ಇರುತ್ತದೆಯೇ ವಿನಃ ಎಡವುತ್ತ ಸಾಗುವ ಹಳೆಯ ಬಂಡಿಯ ಕಲ್ಲಿನ ಕೊರಕಿನ ದಾರಿಯಲ್ಲಿರುವುದಿಲ್ಲ.

ಈ ಶತಮಾನವೇ ಒಂದು ಮಹತ್ವದ ತಿರುವಾಗಿದ್ದು, ಮಾನವನ ಆಂತರ್ಯ ಹಾಗೂ ಬಾಹ್ಯ ಇತಿಹಾಸದಲ್ಲಿ ಅಗಾಧ ಮಹತ್ವದ ಬದಲಾವಣೆಗಳನ್ನು ಕಾಣುತ್ತಿರುವ ಈ ಅಸಾಧಾರಣ ಶತಮಾನದಲ್ಲಿ ಭಾರತ ಹಾಗೂ ಇಡೀ ಜಗತ್ತು ಅವುಗಳ ಭವಿಷತ್ತಿನೆಡೆಗೆ ತೆಗೆದುಕೊಳ್ಳುತ್ತಿರುವ ಹೆಜ್ಜೆಗಳು ಪ್ರಬಲವಾಗಿ ನಿರ್ಣಯವಾಗುತ್ತಿರುವ ಕಾಲ ಇದು. ಈಗ

ನಾವು ಹೇಗೆ ಕ್ರಿಯಾಶೀಲರಾಗುವೆವೋ ಹಾಗೆಯೇ ನಮ್ಮ ಕರ್ಮದ ಫಲವು ನಮಗೆ ದೊರೆಯಲಿದೆ. ಈ ಸಮಯದ ಈ ಬಗೆಯ ಪ್ರತಿಯೊಂದು ಕರೆಯು ಒಂದು ಸುವರ್ಣಾವಕಾಶವೂ ಹೌದು, ಆಯ್ಕೆಯೂ ಹೌದು, ನಮ್ಮ ಜನರ ಚೈತನ್ಯಕ್ಕೆ ಒಡ್ಡಿದ ಪರೀಕ್ಷೆಯೂ ಹೌದು. ಇದು ಪ್ರತಿಯೊಬ್ಬರಲ್ಲಿ ತನ್ನತನದ ಉನ್ನತ ಸ್ಥಿತಿಗೇರಿದ್ದು, ಹಾಗೂ ದೈವಿಕ ಪ್ರಭುವಿನ ನಿಜವಾದ ಕೃಪೆಯು ಅದರ ಪರವಾಗಿ ಇರಲು ಅರ್ಹತೆ ಹೊಂದಿತ್ತು ಎಂದು ಹೇಳುವಂತಾಗಲಿ.

# ರಾಷ್ಟ್ರೀಯ ಶಿಕ್ಷಣ

ಸದ್ಯದ ಕ್ಷಣಗಳಲ್ಲಿನ ಭಾರತದ ರಾಷ್ಟ್ರೀಯ ಜೀವನದ ಸಮಸ್ತ ಚಲನೆಯನ್ನು ಒಂದು ಸಾರವತ್ತಾದ ನುಡಿಯಲ್ಲಿ ವರ್ಣಿಸಬಹುದಾದರೆ: ತನ್ನ ಅನಿರ್ಬಂಧಿತ ಮತ್ತು ಸ್ವಯಂಪ್ರೇರಿತ ಪ್ರಗತಿಗೆ ಅಡ್ಡಿಬರುವ ಅಥವಾ ಅದರ ದಿಕ್ಕು ಬದಲಿಸುವ ಎಲ್ಲ ಬಗೆಯ ಅಸಹಜ ಸ್ಥಿತಿಗಳ ಬಂಧನಗಳಿಂದ ತನ್ನನ್ನು ಬಿಡುಗಡೆಮಾಡಿಕೊಳ್ಳುವತ್ತ ಸಾಗುವ, ಒಳಗಿನಿಂದ ಹುಟ್ಟಿಕೊಂಡಿರುವ ಒತ್ತಡ ಇದು. ತನಗೆ ಅಡ್ಡವಾಗಿ ಕಟ್ಟಿದ ಗೋಡೆಯನ್ನು ಒಡೆದು ತನ್ನ ಸಹಜ ಹರಿವನ್ನು ಕಂಡುಕೊಳ್ಳಲು ಯತ್ನಿಸುತ್ತಿರುವ ಪ್ರವಾಹದ ಚಲನೆ ಇದು. ರಾಜಕೀಯ, ಆಡಳಿತ, ಸಮಾಜ, ವಾಣಿಜ್ಯ, ಶಿಕ್ಷಣ ಈ ಎಲ್ಲ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಜೀವನವು ತನ್ನ ಆಂತರ್ಯದ ಪುಟಿನೆಗೆವ ಪ್ರೇರಣೆಗಳಾಗಿರುವ ನವ ಆಕಾಂಕ್ಷೆಗಳು, ಶಕ್ತಿ ಮತ್ತು ಪ್ರವೃತ್ತಿಗಳಿಗೆ ಸಹಜ ಅಭಿವ್ಯಕ್ತಿ ನೀಡದೇ, ಅದು ಕೇವಲ ಹೊರಗಿನ ರೂಪಕ್ಕೆ ತನ್ನನ್ನು ಸೀಮಿತಗೊಳಿಸಿಕೊಂಡು ಸ್ಥಾಪಿತ ಅಭ್ಯಾಸ ಅಥವಾ ದಿನಚರಿಯಲ್ಲಿ ಚಲಿಸಬೇಕಾದ ದುರ್ವಿಧಿಯನ್ನು ಅನುಭವಿಸುತ್ತಿರುವುದರಿಂದ ಈ ಪ್ರಯತ್ನವು ಅನಿವಾರ್ಯವಾಗಿ ಹಲವು ಮಗ್ಗಲುಗಳನ್ನು ಮತ್ತು ಆಕಾರಗಳನ್ನು ಪಡೆದುಕೊಳ್ಳುತ್ತದೆ. ರಾಷ್ಟ್ರೀಯ ಶಿಕ್ಷಣದ ವ್ಯವಸ್ಥೆಯನ್ನು ಕಂಡುಕೊಳ್ಳುವ ಮತ್ತು ಸಂಘಟಿಸುವ ಪ್ರಯತ್ನವು ತನ್ನ ವಿಮೋಚನೆಯ, ತನ್ನತನವನ್ನು ಕಂಡುಕೊಳ್ಳುವ ಈ ಸಾಮಾನ್ಯ ಪ್ರಯತ್ನದ ಅಂಗವಾಗಿದೆ. ಬಹುಶಃ ಇದುವೇ ಎಲ್ಲ ಚಳುವಳಿಗಿಂತ ಕೇಂದ್ರ ಚಳುವಳಿ ಹಾಗೂ, ಅಂತಿಮವಾಗಿ ಇದುವೇ ಅತ್ಯಂತ ಮುಖ್ಯವಾಗಿರುತ್ತದೆ; ಏಕೆಂದರೆ, ಸದ್ಯದ ರೂಪರಹಿತ ಸ್ಥಿತಿಯಲ್ಲಿರುವ ರಾಷ್ಟ್ರದ ಚೈತನ್ಯಕ್ಕೆ ಒಂದು ನಿರ್ದಿಷ್ಟ ರೂಪವನ್ನು ಕೊಡುವುದು ಇದುವೇ. ವಾಸ್ತವವಾಗಿ ಇದು ಕೇವಲ ಅರಾಜಕ ಪ್ರವೃತ್ತಿಗಳ ಒತ್ತಡವಷ್ಟೇ; ಈ ನಿರಾಕಾರಕ್ಕೆ ರಾಷ್ಟ್ರೀಯ ಸಂಸ್ಕೃತಿ ಮಾತ್ರ ರೂಪ ಹಾಗೂ ಸ್ಥಿರತೆಯನ್ನು ಕೊಡಬಲ್ಲದು; ಆ ಸಂಸ್ಕೃತಿಯನ್ನು ಹುಟ್ಟುಹಾಕುವ ಮತ್ತು ಸಂಘಟಿಸುವ ಒಂದು ಪ್ರಯತ್ನವೇ ರಾಷ್ಟ್ರೀಯ ಶಿಕ್ಷಣವಾಗಿದೆ.

***